ಓಂ

ಶ್ರೀ ಪದ್ಮಾವತೀದೇವಿ ಗ್ರಂಥಮಾಲಾ — ೩

# ಭಕ್ತಿ ಕುಸುಮಾಂಜಲಿ



ಕೆ. ಎಸ್. ಧರಣೇಂದ್ರಯ್ಯ

# ಭಕ್ತಿ ಕುಸುಮಾಂಜಲಿ



ಭಗವಾನ್ ಶ್ರೀ ಗೋಮಟೇಶ್ವರಸ್ವಾಮಿಯ ಮಹಾಮಸ್ತಕಾಭಿಷೇಕ
(೨೬-೨-೧೯೮೦)

ಓಂ

ಶ್ರೀ ಪದ್ಮಾವತೀದೇವಿ ಗ್ರಂಥಮಾಲಾ — ೩

# ಭಕ್ತಿ ಕುಸುಮಾಂಜಲಿ




ಕೆ. ಎಸ್. ಧರಣೇಂದ್ರಯ್ಯ
ಎಂ.ಎ., ಬಿ.ಟಿ.

# ಸಮರ್ಪಣೆ

ಕಲಿಯುಗದ ಆದಿಯಲ್ಲಿ ಅವತರಿಸಿದ ಶ್ರೀ ಆದಿತೀರ್ಥಂಕರ ಪರಮದೇವರಾದ ಭಗವಾನ್ ವೃಷಭಸ್ವಾಮಿಯವರ ದ್ವಿತೀಯ ಪುತ್ರರಾಗಿ, ಭರತಚಕ್ರವರ್ತಿಯ ಅನುಜರಾಗಿ ಜನಿಸಿ: ಪ್ರಥಮ ಕಾಮದೇವರೆಂದು ಪ್ರಸಿದ್ಧರಾಗಿ: ಅಣ್ಣನಾದ ಚಕ್ರವರ್ತಿಯಿಂದ ರಾಜ್ಯವನ್ನು ಧರ್ಮಯುದ್ಧದಲ್ಲಿ ಗೆದ್ದರೂ, ರಣರಂಗದಲ್ಲಿಯೇ ವೈರಾಗ್ಯವನ್ನು ಹೊಂದಿ ಘೋರ ತಪಸ್ಸನ್ನಾಚರಿಸಿ ಪೂಜ್ಯ ತಂದೆಯವರಾದ ಆದಿ ತೀರ್ಥಂಕರರಿಗಿಂತಲೂ ಮೊದಲು — ಈ ಕಲಿಯುಗದಲ್ಲಿ ಎಲ್ಲರಿಗಿಂತಲೂ ಮೊದಲು ಮೋಕ್ಷವನ್ನು ಪಡೆದ, ಸಿದ್ಧಪರಮಾತ್ಮಸ್ವರೂಪರಾದ ಮತ್ತು ಭಕ್ತೋತ್ತಮ ಚಾಮುಂಡರಾಯನ ಭಕ್ತಿಯ ಫಲವಾಗಿ ಕನ್ನಡ ನಾಡಿನಲ್ಲಿ ನೆಲಸಿ ನಮ್ಮ ನಾಡನ್ನು ಪುಣ್ಯ ಪವಿತ್ರ ತೀರ್ಥಕ್ಷೇತ್ರವನ್ನಾಗಿ ಮಾಡಿರುವ, ಜಗತ್ತಿನ ಪಾರಮಾರ್ಥಿಕ ಗುರುವಾದ ಭಗವಾನ್ ಶ್ರೀ ಗೋಮಟೇಶ್ವರಸ್ವಾಮಿಯವರ ಪಾದಾರವಿಂದಗಳಲ್ಲಿ ಪಾಮರನು ಅತ್ಯಂತ ಭಕ್ತಿಯಿಂದೊಪ್ಪಿಸಿದ

**ಭಕ್ತಿ ಕುಸುಮಾಂಜಲಿ**

# ಮುನ್ನುಡಿ

"ಭಕ್ತಿ ಕುಸುಮಾಂಜಲಿ"ಯು ನನ್ನ ಕೆಲವು ಕವನಗಳ ಸಂಗ್ರಹ. ಕೆಲವು ಗೀತೆಗಳು ದಿನಚರಿಯ ದೇವಪೂಜೆಗಾಗಿ, ಆಗಾಗ ಮಾಡುವ ಭಜನೆಗಾಗಿ ನನ್ನ ಉಪಯೋಗಕ್ಕಾಗಿ ಬರೆದವುಗಳು. ಕೆಲವು ನಾನು ತೀರ್ಥಯಾತ್ರಾ ಪ್ರವಾಸ ಮಾಡುತ್ತಿದ್ದಾಗ ದೇವಸನ್ನಿಧಿಯಲ್ಲಿ ಕುಳಿತು ಹಾಡಿದವುಗಳು. ಈ ಕುಸುಮಗಳಲ್ಲಿ ಸೌಂದರ್ಯವೂ ಸೌರಭ್ಯವೂ ಇವೆಯೆಂದು ನಾನು ಹೇಳಲಾರೆ. ಏನಿಲ್ಲದಿದ್ದರೂ ಭಕ್ತಿಯಿದೆ. ಗೃಹಸ್ಥರ ಮನೆಗೆ ದೇವರ ಮನೆಯು ಅತ್ಯಂತ ಸೊಬಗನ್ನೂ ಶಾಂತಿ ಸೌಖ್ಯಗಳನ್ನೂ ಕೊಡುವ ಚಿಂತಾಮಣಿ. ಜೀವನದ ಬೇನೆಯನ್ನು ಹೋಗಲಾಡಿಸುವ ಮಾಂತ್ರಿಕ ಶಕ್ತಿಯು ದೇವತಾ ಪ್ರಾರ್ಥನೆಯಲ್ಲಿದೆ. ತಳಮಳಗೊಳ್ಳುತ್ತಿರುವ ಮನಸ್ಸು ಪ್ರಾರ್ಥನೆಯಿಂದ ನೆಮ್ಮದಿಯಾಗುವುದು. ಶುಭ ಭಾವನೆಗಳು ಮೂಡಿ, ಪುಣ್ಯವನ್ನು ಕಟ್ಟಿ, ಪಾಪಕರ್ಮಗಳ ಉಲ್ಬಣವನ್ನು ಕಡಮೆ ಮಾಡುವುವು. ಈ ನನ್ನ "ಭಕ್ತಿ ಕುಸುಮಾಂಜಲಿ"ಯು ಭಕ್ತಬಾಂಧವರ ದಿನಚರಿಯ ಪೂಜೆಗೂ ಪ್ರಾರ್ಥನೆಗೂ ಸಹಾಯಕವಾಗಿ ಪೂಜೆಯ ಮತ್ತು ಪ್ರಾರ್ಥನೆಯ ಆನಂದವನ್ನು ಸ್ವಲ್ಪಮಟ್ಟಿಗಾದರೂ ಹೆಚ್ಚಿಸಿದರೆ ಈ ಕಾಡು ಪೂಬೊಗಸೆಯ ಫಲವು ನನಗೆ ಬಂದಂತಾಯಿತು.

ಶ್ರವಣಬೆಳ್ಗೊಳ,
೨೬ನೆಯ ಫೆಬ್ರವರಿ ೧೯೪೦.

ಶಾ. ಸ. ಫ.

# ವಿಷಯ ಸೂಚಿಕೆ

ವಿಷಯ — ಪುಟ

I. ಪದ್ಯಗಳು:

೧ ಜೀವನ ದರ್ಶನ .. .. ೧
೨ ಕನ್ನಡ ಭಕ್ತಾಮರ ಸ್ತೋತ್ರ .. ೯
೩ ಶ್ರೀಗೋಟೇಶ್ವರ ಸ್ತವನ .. .. ೨೬
೪ ಶ್ರೀವರ್ಧಮಾನ ಮಹಾವೀರ ತೀರ್ಥಂಕರ ಪರಮದೇವರ ಸ್ತವನ .. .. ೩೦
೫ ಸ್ವಸ್ತಿಶ್ರೀ ಜಯಕೀರ್ತಿ ನಿರ್ಗ್ರಂಥ ಮಹಾಸ್ವಾಮಿಗಳವರ ಗುಣಸ್ತವನ .. ೩೫
೬ ಸ್ವಸ್ತಿಶ್ರೀ ದೇಶಭೂಷಣ ನಿರ್ಗ್ರಂಥ ಮುನಿಮಹಾರಾಜರ ಸ್ತವನ .. ೪೧
೭ ಸ್ವಸ್ತಿಶ್ರೀ ಚಾರುಕೀರ್ತಿ ಪಂಡಿತಾಚಾರ್ಯ ವರ್ಯ ಮಹಾಸ್ವಾಮಿಗಳವರ ಗುಣಗಾನ ೫೦

II. ಗೀತೆಗಳು:

೧ ಶ್ರೀ ಆದಿಜಿನೇಶ್ವರ ಗೀತೆ .. .. ೫೬
೨ ಶ್ರೀ ಅಜಿತ ತೀರ್ಥಂಕರರ ಜೋಗುಳ .. ೫೭
೩ ಶ್ರೀ ಬಾಹುಬಲಿಸ್ವಾಮಿಯ ಕೀರ್ತನೆ .. ೫೮
೪ ಶ್ರೀ ಬಾಹುಬಲಿಸ್ವಾಮಿ ಕೀರ್ತನೆ .. ೫೯
೫ ವೈರಾಗ್ಯ ಗೀತೆ .. .. ೬೦
೬ ಶ್ರೀ ಪದ್ಮಾವತೀದೇವಿಯ ಕೀರ್ತನೆ .. ೬೧
೭ ಶ್ರೀ ಪದ್ಮಾವತೀದೇವಿಯ ಸನ್ನಿಧಿಯಲ್ಲಿ ಭಕ್ತನ ಮೊರೆ .. .. ೬೨
೮ ಶ್ರೀ ಜ್ವಾಲಾಮಾಲಿನೀದೇವಿ ಸ್ತೋತ್ರ ಪಂಚಕ ೬೪
೯ ಶ್ರೀ ಜ್ವಾಲಾಮಾಲಿನೀದೇವಿ ಕೀರ್ತನೆ .. ೬೫
೧೦ ಶ್ರೀ ಜಿನದತ್ತರಾಯನ ಗುಣಗಾನ .. ೬೬

| ವಿಷಯ | | ಪುಟ |
|---|---|---|
| **III. ಕೋಲಾಟದ ಹಾಡುಗಳು :** | | |
| ೧ ಯಾರಿಗೆ ಯಾರುಂಟು ಜಿನತಂದೆ | .. | ೬೭ |
| ೨ ಯಾರು ಕೈಬಿಟ್ಟರು ನೀ ಕೈಯ ಬಿಡದಿರು ಗೋಮಟೇಶ | .. .. | ೬೮ |
| ೩ ಹಿಂದಿಲ್ಲ ಸ್ವಾಮಿ ಮುಂದಿಲ್ಲ | .. | ೭೦ |
| ೪ ದೇವರಾಜ ವಲ್ಲಭ ಗೀತೆ .. | .. | ೭೨ |


## ಚಿತ್ರಗಳ ಪಟ್ಟಿ

| | | |
|---|---|---|
| ೧ ಭಗವಾನ್ ಶ್ರೀ ಗೋಮಟೇಶ್ವರಸ್ವಾಮಿ .. | | ಮುಖಪತ್ರ |
| ೨ ಭಗವಾನ್ ಶ್ರೀ ಆದಿನಾಥ ತೀರ್ಥಂಕರ ಪರಮದೇವರು ಸಮವಸರಣದಲ್ಲಿ ವಿರಾಜಮಾನರಾಗಿರುವುದು | .. .. | ೯ |
| ೩ ಸ್ವಸ್ತಿಶ್ರೀ ಜಯಕೀರ್ತಿ ನಿರ್ಗ್ರಂಥ ಮಹಾಸ್ವಾಮಿಗಳವರು .. | .. | ೩೫ |
| ೪ ಸ್ವಸ್ತಿಶ್ರೀ ದೇಶಭೂಷಣ ನಿರ್ಗ್ರಂಥ ಮಹಾಸ್ವಾಮಿಗಳವರು .. | .. | ೪೧ |
| ೫ ಸ್ವಸ್ತಿಶ್ರೀ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಮಹಾಸ್ವಾಮಿಗಳವರು .. | .. | ೫೦ |

# ಜೀವನ ದರ್ಶನ†

(PHILOSOPHY OF LIFE)

ಬಾಳಹಾಳೆಯ ಹಲವ ಮಗುಚಿ ನೋಡೆಲೆ ಜೀವ
ಸುಂದರಾಕೃತಿ ಇಹವೊ? ಬರಿ ಮಸಿಯ ಕಪ್ಪೋ?
ದಿನಕೊಂದು ಹಾಳೆಯದು ಮಗುಚಿ ಬೀಳುತಲಿಹುದು;
ಪಾಪದಾ ಪುಣ್ಯದಾ ರೇಖೆಯೊಂದಚ್ಚಿನಿಂ
ದಿನಚರಿಯ ವೃತ್ತಾಂತವಾತ್ಮನನ್ನೊತ್ತುತಿದೆ.
ಜೀವಿಯಾ ಗೆಯ್ಮೆ ನುಡಿ ಭಾವನೆಯನನುಸರಿಸಿ
ಪುಣ್ಯದಾ ಪಾಪದಾ ಜೋಡಣೆಯು ಸಾಗುತಿಹು
ದಾವಗಂ ಆತ್ಮನೊಳಗದ್ಭುತವು ತಾನೆನಿಸಿ
ಆಶ್ರವ*ವು ಕರ್ಮವನು ಬಾಯೆಂದು ಕೂಗುತಿದೆ.
ಬಂಧ*ವದು ಕರ್ಮದಿಂದಾತ್ಮನನು ಬಿಗಿಯುತಿದೆ.
ಶುಭ ಭಾವ ಗೆಯ್ಮೆ ನುಡಿ ಪುಣ್ಯವನು ಕಟ್ಟುವುವು.
ದುರ್ಭಾವ ಗೆಯ್ಮೆ ನುಡಿ ಪಾಪವನು ಸೆಳೆಯುವುವು.
ಸದ್ಭಾವ ತೊಡಿಗೆಯಲಿ ಮನವ ಸಿಂಗರಮಾಡಿ,
ಮೆಲ್ಮಾತನುಚ್ಚರಿಸಿ ಜನಕೆ ಸಂತಸವಿತ್ತು,
ಸಚ್ಚರಿತೆ ಹೂವಿನಲಿ ದಿನಗಳನು ಕೈಗೆಯ್ದು
ಜ್ಞಾನದಿಂ ಪೂಜೆಯಿಂ ಸೇವೆಯಿಂ ದಾನದಿಂ
ತನುಮನಧನಂಗಳನು ಹೆಗ್ಗುರಿಗೆ ಮುಡಿಪಿಟ್ಟು
ಜೀವನವ ಪಾವನವ ಮಾಡೆಲೆವೊ! ಜೀವಿಯೇ!!
ಉರುಬದಿರು ಬೆಳಕೀವ ಜೀವನದ ಸೊಡರನ್ನು;
ಕಿಡಿಯಾರೆ ಮಸಿಹೊಗೆಯ ಕಪ್ಪಿನಲಿ ಮಾಸದಿರು;

† ಬೆಂಗಳೂರು ಇಂಟರ್‌ಮೀಡಿಯಟ್ ಕಾಲೇಜಿನ ಸಂಘದವರು ೧೯೪೦ರಲ್ಲಿ ಪ್ರಕಟಿಸಿದ "ಯೂನಿಯನ್ ಮ್ಯಾಗಜೈನ್" ಪತ್ರಿಕೆಗಾಗಿ ಬರೆದುದು.

ತಳತಳಸಿ ಹೊಳೆವಂತೆ ಸದ್ಭಾವ ವರ್ತಿಯಿಂ
ಸವಿ ನುಡಿಯ ನೆಯ್ಯಿಂದ ಒಳ್ನಡತೆ ಜೋತಿಯಿಂ
ಜೀವನದ ದರ್ಶನಕೆ ತೋರಿಸಾ ಬಾಂಬೆಳಕ.
ಕಾಲವದು ನಿಲ್ಲದೆಯೆ ಹರಿಯುತಿದೆ ತೊರೆಯಂತೆ.
ಹಾರುತಿವೆ ನಿಮಿಷಗಳು ಜಾರುತಿವೆ ಗಳಿಗೆಗಳು.
ಉರುಳುತಿವೆ ದಿನ ವಾರ ಮಾಸಗಳು ವರ್ಷಗಳು.
ಜೀವನದ ಕೆರೆ ನೀರು ಬಿಸಿಲಿನಲಿ ಹಿಂಗುತಿದೆ.
ಕೆರೆ ತಾರ ಮುನ್ನ ನಾವುತ್ತು ಗದ್ದೆಗಳನ್ನು
ಬೆಳೆಮಾಡಿ ಜೀವನವ ನಂದನವ ಮಾಡುವ.
ದಿನದಿನವು ಕಳೆಗಿತ್ತು ಬೆಳೆ ಹಸನ ಮಾಡುವ
ಪುಸಿಮಾತು ವಂಚನೆಗಳೆಂದೆನುವ ಗೇಕುಗಳ
ಬುಡಮುಟ್ಟ ಕಿತ್ತೊಗೆದು, ಚಿಗುರಿ ನಾವ್ ಬಾಳುವ.
ಸುಂದರದ ಮೂರ್ತಿಗಳ ಕಡೆಯುತಾ ಹಾಳೆಯಲಿ
ಜೀವನವ ನಲಿಯಿಸುವ. ಕುಣಿಯಿಸುವ. ತಣಿಯಿಸುವ.
ಕಯ್ಯೊಲನ ಕಳೆಗೀಳ್ವ ಹಿರಿಗಜ್ಜ ಸುಲಭವೇ ?
ಸುಭಗವೇ ? ಕೀಳುತಿರೆ ಹೊಸ ಮೊಳಕೆ ಮೂಡುತಿವೆ.
ಹೆಣ್ಣೊಲುಮೆ ಮೊಳಕೆಗಳು, ಹೊನ್ನಾಸೆ ಮೊಳಕೆಗಳು
ಮಣ್ಣನಾಳುವ ಮೊಳಕೆ, ಪದವಿಗೇರುವ ಮೊಳಕೆ.
ಕಳೆಗಳಿವು. ಜೀವನದ ಸಿರಿಲತೆಯ ಬಗ್ಗಿಸುತ,
ಬದುಕಿನಾ ಸಾರವನು ಹೀರುತ್ತ, ಬೆಳೆಯುತಿವೆ.
ಲಾಂಟಾನ ಗಿಡದಂತೆ, ಪಾಪಾಸು ಕಳ್ಳಿಯೊಲು.
ಜೀವನದ ಗುರಿ ಹಿಡಿದು ಮುಂಬರಿದು ಸಾಗುವೆನೆ?
ಬಟ್ಟೆತಾ ಕಗ್ಗಲ್ಲ ಕಣಿವೆಯಂತೇರುತಿದೆ,
ಹಳ್ಳದಿಂ ದಿಣ್ಣೆಯಿಂ ಮುಳ್ಳಿನಾ ಪೊದೆಗಳಿಂ.

ಹಿಂದಿರುಗಿ ಜೀವನದ ಹಾಳೆಗಳ ನೋಡುವೆನೆ?
ಸುಡುಗಾಡು, ಮರುಭೂಮಿ, ರಸವಿಲ್ಲ, ಫಲವಿಲ್ಲ.
ಮುಂದೇನು? ಮತ್ತೊಂದು ಮರುಭೂಮಿ ಆಸೆಯಂ
ತುಂಬುತಿದೆ. ಕಣ್ಮನಕೆ ಮಂಕಹುಡಿಯೂದುತಿದೆ.
ಹಿಂದಿನಾ ಮರುಭೂಮಿ ಬೇನೆಗಳ ಮರೆಯುತಲಿ,
ಮುಂದೇನೊ ಇಹುದೆಂದು ಎನ್ನ ಮನ ಹಾರುತಿದೆ.
ಮನದೊಡನೆ ದೇಹವದು ಹುರುಡಿನಿಂದೋಡುತಿದೆ.
ಓಡೋಡಿ ಸೊರಗಿದೆನು ನೆಳಲಿಲ್ಲ ತಂಪಿಲ್ಲ.
ಬಾಯಾರಿ ಬಳಲಿದೆನು ನೀರಿನಾ ಹನಿಯಿಲ್ಲ.
ಮೊರಡಿಯೊಳು ನೀರುಂಟೆ? ಸುಟ್ಟುರಿಯ ಕಾವುಂಟು.
ಜೀವನಕೆ ಹೇಸಿದೆನು. ಮೂಡಣಕೆ ತಿರುಗಿದೆನು.
ಬಲುದೂರ ಹಾದಿಯನು ತಳ್ಳಿದೆನು ತಡವರಿಸಿ.
ಚಿಗುರ ಪೂವೇರಿದಾ ಮರವೊಂದು ಕಾಣಿಸಿತು.
ಕರಿಮೋಡದಂಚಿನಲಿ, ಬೆಳ್ಳಿಯಾ ಗೆರೆಯಂತೆ,
ಸುಡುತಿದ್ದ ಜೀವವನು ತಣಿಸಿತಾ ಮರವಾಗ.
ಕಾತರದಿ ಸಾಗಿದೆನು ನೀರ ನೆಳಲಾಸೆಯಲಿ.
ಹೆಮ್ಮರದ ಶಿಖರದಲಿ ಚಿಗುರುಂಟು ಹೂವುಂಟು.
ಅಡಿಯಲ್ಲಿ ಹರಡಿರುವ ನೆಳಲಿನಾ ತಂಪುಂಟು.
ನಾಯ್ಮೊಲೆಯ ಹಾಲಂತೆ, ಉಪಕಾರವಿನಿತಿಲ್ಲ.
ಸೀಗೆಯಾ ಬಳ್ಳಿಗಳು ಹೆಣೆದಿಹವು ಬಲೆಯಂತೆ.
ಮುಳ್ಳುಗಳು ಹಾಸಿಹವು ತಂಪಾದ ನೆಳಲಲ್ಲಿ.
ಕಾಲಿಡಲು ತಳವಿಲ್ಲ. ದಣುವಾರೆ ತೆರಪಿಲ್ಲ.
ನಿಟ್ಟುಸಿರನಿಟ್ಟೊಂದ ಮುಂಬರಿದು ಸಾಗಿದೆನು.
ಮರುಭೂಮಿ ಕಳೆದಾಯ್ತು. ಹೆಗ್ಗಾಡ ಹೊಕ್ಕಾಯ್ತು;

ಬಾಯಾರಿ ತೊಳಲುತಿರೆ ಕೊಳವೊಂದು ಕಾಣಿಸಿತು.
ಬೇರು ಬಿಳಲಾಸರೆಯ ಹೊಂದುತ್ತಲಿಳಿಯುತ್ತ
ನೀರೀಂಟುವಾಸೆಯಿಂ ಕಾತರದಿ ಬೊಗಸೆಯನು
ತಂಪಾದ ತಿಳಿನೀರಿನಿಂದಾಗ ತುಂಬಿದೆನು.
ಈಂಟಲಾ ನೀರನ್ನು ಕಯ್ಯೆತ್ತೆ, ಬುಸ್ಸೆಂಬ
ಭೀಕರದ ದನಿಯೊಂದು ಕೇಳುತಿರೆ ನಡುಗಿದೆನು.
ಎದುರಿನಾ ಪೊಟರೆಯಿಂ ಹೆಬ್ಬಾವು, ಹೆಡೆದೋರು
ತೆನ್ನನ್ನು ನುಂಗುವಾ ರೋಷದಲಿ ನೋಡಿದುದು.
ಭೀತಿಯಾ ಕಂಪನದಿ ಬೊಗಸೆ ನೀರ್ ಚೆಲ್ಲಿದುದು.
ಮೈ ಬೆವರಿ, ನಡುಗುತ್ತ, ಬದುಕುವಾಸೆಯ ನೀಗಿ.
ಬೇರುಗಳ ಹಿಡಿಯುತಲಿ, ನೀರವದಿ ಹಿಂದೆಗೆದು,
ದೇವರನು ನೆನೆಯುತಲಿ ಸೇರಿದೆನು ದಡವನ್ನು.
ದಾಹದಿಂ ಬಳಲುತಲಿ, ಸಾಗಿದೆನು ಹಳುವದಲಿ.
ಕಾಲಿನಾ ಬಲವಾರೆ, ಬಿದ್ದೆನೊಂದೆಡೆಯಲ್ಲಿ.
ಅರಿವಿಲ್ಲದರಗಳಿಗೆ ಹೊರಳಿದ್ದೆ ನೆಳಲಲ್ಲಿ,
ನೆಗ್ಗಲಿಯ ಮುಳ್ಳುಗಳ ಹಸುರಾದ ಹಾಸಿನಲಿ.
ಅರಿವಾಗೆ ಕಣ್ಬಿಟ್ಟೆ.   ನೋಡಿದೆನು ಕೊಂಬೆಯನು.
ನೀರಡಿಕೆ, ಹಸಿವಿನಾ ಬೇನೆಯಿಂ ಸಾಯುತಿಹೆ.
ಈ ವಿಷಮ ಸಮಯದೊಳು ಮರದ ಮೇಲ್ಗೊಂಬೆಯೊಳು
ಹೆಜ್ಜೇನ ಗೂಡೊಂದು, ಕಣ್ಸವಿಯು ತೂಗುತಿದೆ.
ಜೇನ್ ಕೊಡವು ಜೋಲುತಿದೆ ತುಂಬಿದಾ ರಸದಿಂದ.
ಸೊರಗಿದ್ದ ದೇಹವದು ಕುಪ್ಪಳಿಸಿ ಹಾರಿದುದು.
ಬಾಯಲ್ಲಿ ನೀರೂರೆ ನೀರಡಿಕೆಯಾರಿತ್ತು.
ನಾನೆದ್ದು ಬೆಕ್ಕಂತೆ ನೀರವದಿ ಮರವೇರಿ,

ಮುರಿದೊಂದು ರೆಂಬೆಯಲಿ ಚುಚ್ಚಿದೆನು ಜೇನ್ ಕೊಡಕೆ.
ಹನಿಗಳಿಗೆ ಹಾತೊರೆದು ಬಾಯ್ತೆರೆದು ಕುಳಿತಿರಲು,
ಕುಳಿತಿದ್ದ ಕೊಂಬೆಯದು ಬೀಸಿದುದು ರಭಸದಲಿ
ಕೆಳಗೇನು? ಮದ್ದಾನೆ! ಕೊಂಬೆಯನು ಸೊಂಡಿಲಲಿ
ಜಗ್ಗುತ್ತಲೆಳೆಯುತಿದೆ. ಜೀವವದು ಹಾರುತಿದೆ.
ಕೊಂಬೆಯಂತಲ್ಲಾಡೆ ಜೇನಹುಳು ಗುಂಪೆಲ್ಲ
ಜೀಯೆಂದು ಹಾರಿದುದು ಕೋಪದಲಿ ನಾಲ್ದೆಸೆಗೆ.
ಗೂಡ ತಾಣದಿನೆದ್ದು ಕಲಕಿದವರಾರೆಂದು
ಹುಡುಕುತಲಿ ಹೆಜ್ಜೇನು ಮೊರೆಯುತಿವೆ ಹಾರಾಡಿ.
ಕೆಳಗಲ್ಲಿ ಮದ್ದಾನೆ! ಏಕಾಕಿ ಸಲಗವಿದೆ!!
ಮೇಲಲ್ಲಿ ಸಿಟ್ಟಿನಿಂ ಭೋರ್ಗರೆವ ಮಧುಪಕುಲ.
ಇಷ್ಟಾಗೆ, ಮಧುವಾಸೆ ತೊಲಗದದು ಮನದಿಂದ.
ಇರುವೆನೇ? ಕುಳಿತಿರುವ ಕೊಂಬೆಯದು ಬಾಗುತಿದೆ.
ಕುಡಿವೆನೇ? ಹಗೆಯೆಂದು ಮುತ್ತುತಿವೆ ಹೆಜ್ಜೇನು.
ಇಳಿವೆನೇ? ಕನಲಿದ್ದ ಸಲಗನಿಂ ದುರ್ಮರಣ!
ಉಳಿವೆನೇ? ಮೇಲ್ಬಿದ್ದ ಹೆಜ್ಜೇನಿನಿಂ ನೋವು!!
ಈ ದುಃಖದೊಳಗಾಳ್ದು ಮಧುವಿನಾಸೆಯು ಬಿಡದೆ
ಬಾಯ್ದೆರೆಯುತೊಂದು ಹನಿ ಜೇನಿಂಗೆ ನರಳುವೀ
ಪಾಮರನ ಮಾಳ್ಕೆಯೊಳು ಸಂಸಾರಿ ಜೀವಿಗಳು,
ಉಂಡುದನು ಕಂಡುದನು ಮರೆತು ನಾವ್ ಬಳಲಿಹೆವು.
ಮಧುವಿನೊಲು ಕಿರಿದಾದ ಸುಖಕಾಗಿ ಒದೆದಾಡಿ
ಹೋರಾಡಿ ಹಾರಾಡಿ ನರಕದಲಿ ಮುಳುಗಿಹೆವು.
ಬದುಕನ್ನು ಕರಿಮುಸಿಯ ಕಪ್ಪಿಂದ ಕೆಡಿಸಿಹೆವು.
ಈ ದಿನವ ಈ ಹೊತ್ತ ಈ ಹೊನ್ನ ಗಳಿಗೆಯಂ

ಜೀವನದ ಮೇಲ್ಗುರಿಗೆ ಮುಡಿಪಾಗಿ ಕಟ್ಟದಲೆ,
ಈ ದಿನದಿ ತಿನ್ನುವೆವು ಮೆರೆಯುವೆವು ಕುಣಿಯುವೆವು;
ನಾಳೆ ದಿನ ದೇವರುಂ ನಾಡಿದ್ದು ಸೇವೆಯುಂ;
ಈ ಹಾಳು ಹಾಡಿನಿಂ ಗುರಿಯನ್ನು ಮರೆತಿಹೆವು.
ನಿನ್ನೆ ಕಳೆದೋಡಿಹುದು. ನಾಳೆಯದು ಹುಟ್ಟಿಲ್ಲ.
ಈ ಹೊತ್ತು ನಮ್ಮದಿದು ಕೈ ಕಳಚಿ ಸಿಕ್ಕದದು.
ಕಡೆಯುವಾ ಸುಂದರದ ಮೂರ್ತಿಯನು ಜೀವನದ
ಹಾಳೆಯಲಿ, ನಾಳೆಗಂ ತಳ್ಳುತಲಿ ಮಲಗದೆಯೆ.
ದಿನಗಳಿಗೆ ರೆಕ್ಕೆಗಳು, ವತ್ಸರಕೆ ಪುಕ್ಕಗಳು,
ಹಾರುತಲಿ ಸೇರುತಿವೆ, ಅನಂತಾಕಾಶವನು.
ಕಡಲ ಸೇರುವ ಮುನ್ನ ನದಿ ನೀರ ಜೋಕೆಯಿಂ
ತಿರುಗಿಸುತ ಹಾಯಿಸುತ ಕಯ್ವೊಲಕೆ ತೋಟಕಂ,
ಹುಲುಸಾದ ಬೆಳೆ ಬೆಳೆದು ಸುಗ್ಗಿಯೊಳು ನಲಿಯುವ.
ಹಿಡಿ ಹಿಡಿದು ನಿಮಿಷವನು ದಿನ ವಾರ ಮಾಸವನು,
ಜೀವನದ ಹೆಗ್ಗುರಿಯ ಸಾಧನೆಗೆ ತಿರುಗಿಸುವ.
ತೃಪ್ತಿಯಾ ಶಾಂತಿಯಾ ಬೆಳೆ ಬೆಳೆದು ನಲಿಯುವ.
ಓಡುತಿಹ ಕಾಲವನು ನೆರೆಯನ್ನು ಯೌವನವ,
ತಡೆಗಟ್ಟಿ ನಿಲಿಸುವವನಾವನುಂ ಹುಟ್ಟಿಲ್ಲ.
ಕಾಲನಂ ಪೌರುಷದಿ ಜಯಿಸುವವ ಸಿಕ್ಕಿಲ್ಲ.
ಜರೆ ರೋಗ ಸಾವುಗಳಿಗೀಡಾದ ದೇಹವನು
ಪರಮಾತ್ಮ ಜಾನದಲಿ, ಜೀವಿಗಳ ಸೇವೆಯಲಿ
ಕರಗಿಸುತ ಜೀವನದ ತೋಷವನು ಹೊಂದುವ.
ಸತಿ ಸುತರ ಬಂಧುಗಳ ಸಂಕುಚಿತ ಬಾಳಿನಿಂ
ಹೊರಬಿದ್ದು ಸಾಹಿತ್ಯದೇವಿಯಾ ಸೊಡರಿಂದ

ತತ್ವವನು ಸತ್ಯವನು ಸಾಧಿಸುತ ಬಾಳುವ.
ನಮ್ಮಾಗುಹೋಗುಗಳ ಹೊಣೆ ನಾವೆ? ಮತ್ತಾರು?
ಮಾಡುವವನಾತ್ಮನೇ, ಉಂಬಾತನಾತ್ಮನೇ,
ಮಾಡಿಸುವರಾರಿಹರು? ಆತ್ಮ ತಾ ಹೊರಗಾಗೆ!
ದೇವರೇ? ದೇವರೇಗೆಯ್ವಪನು? ಪರಿಶುದ್ಧ
ಪರಮಾತ್ಮ, ದಾರಿಯಂ ತೋರುವಾ ಸೊಡರವನು.
ಬಾಳಿದವ ಮೇಲ್ಮೆಯಲಿ. ತಾಳಿದವ ಹಿರಿದಾಗಿ.
ನಿಷ್ಕಾಮ ಕರ್ಮವನು ತೋರಿದವ ಮೂಜಗಕೆ.
ಜೀವದಯೆ ಧರ್ಮವನು ಸಾರಿದವ, ನಡಸಿದವ.
ಈ ದೇವನೆಲ್ಲಿಹನು? ಗೋಚರಕೆ ಸಿಲುಕುವನೆ?
ತನುವ ದೇಗುಲ ಮಾಡಿ, ದೇವನನು ಧ್ಯಾನಿಸಲು,
ಕುಳಿತಿರ್ಪನೆದೆಯಲ್ಲಿ. ಕಟ್ಟಿಹನು ಕಣ್ಣಲ್ಲಿ.
ನಿಂದಲ್ಲಿ ನಡೆದಲ್ಲಿ ಕುಳಿತಲ್ಲಿ ಸರ್ವತ್ರ
ಕುಂದದಾ ರೂಪಿಂದ ಕಾಣುವನು ಭಕ್ತರಿಗೆ.
ಗೆಯ್ಮೆಯನು ನುಡಿಯನ್ನು ಭಾವವನು ದೇವನಿಗೆ
ಒಪ್ಪಿಸುತ ಸಂಸಾರದಳಲುಗಳ ತೊಳೆಯುತ್ತ,
ಜೀವನದ ನಂದನವನಾವರಿಸಿ ಬೆಳೆದಿರುವ,
ಆಸೆ ಲಾಂಟಾನವನು ಮೋಹ ಕತ್ತಾಳೆಯನು
ತೃಪ್ತಿ ವೈರಾಗ್ಯದಾ ಕತ್ತಿಯಿಂ ಕತ್ತರಿಸಿ,
ತಾವರೆಯ ದಳದಲ್ಲಿ ಸೋಂಕಿಯುಂ ಸೋಂಕದಾ
ನೀರಹನಿ ರೀತಿಯೊಳು, ಸಂಸಾರಿ ಜೀವಿಗಳು
ನಿರ್ಲಿಪ್ತರಾಗಿ ತಾವ್ ಬಾಳಲ್ಕೆ, ಬಂಧನದ
ಬಿಗಿ ಸಡಲಿ, ಸಂಸಾರವಿಹದಲ್ಲಿ ಸೊಗವನ್ನು,
ಪರದಲ್ಲಿ ಸಗ್ಗವನು, ಮುಕ್ತಿಯನು ನೀಡುವುದು.

ಸಂವರ* ವು ತಡೆಗಟ್ಟೆ ಬರುತಿರುವ ಕರ್ಮಗಳ,
ನಿರ್ಜರೆ*ಯು ದಹಿಸುತಿರೆ ಇರುತಿರುವ ಕರ್ಮಗಳ,
ಬಾಳ ಹಾಳೆಗಳೆಲ್ಲ ಗಮಗಮಿಪ ಕಂಪಿಂದ
ಹೊಸಹೊಸದು ಬಾಸಿಗವು ಹೂಮಾಲೆ ತೆರದಿಂದ
ನವ ಕಳೆಯ ಸವಿ ನೆನಪ ಜೀವನಕೆ ಕೂಡಿಟ್ಟು
ನಲಿಸುವುವು ತಣಿಸುವುವು ಬಾಳನಾನಂದದಿಂ
ಪಾಪದಾ ಮಲಿನವನು ಸವಿಪಾಕ* ಫಲಗೊಟ್ಟು,
ಅವಿಪಾಕ* ತಪದಿಂದ, ನಿರ್ಜರೆ*ಯು ತೊಳೆಯುತಿರೆ,
ಪುಣ್ಯವದು ಸೊಗವಿತ್ತು ಜಾರಿ ತಾ ಹೋಗುತಿರೆ.
ಪಾಪದಾ ನಿಗಡಗಳು, ಪುಣ್ಯದಾ ಹೊಂದೊಡರು
ಮುರಿಮುರಿದು ಆತ್ಮನಿಂ ಕಳಕಳಚಿ ಬೀಳುತಿರೆ,
ಪರಮಾತ್ಮ ರೂಪವದು ಹೊಳೆಯುತಿಹುದಾತ್ಮನೊಳು.
ನಿರ್ವಾಣ ಕೈವಲ್ಯ ಮೋಕ್ಷದೈಶ್ವರ್ಯಗಳು
ಕೆಳೆಯೊಲ್ಮೆಯಿಂದಾಗಲಾತ್ಮನನ್ನಪ್ಪುವುವು.

---

* ಜೈನ ಸಿದ್ಧಾಂತದಲ್ಲಿ ಜೀವ, ಅಜೀವ, ಆಶ್ರವ, ಬಂಧ, ಸಂವರ, ನಿರ್ಜರ, ಮೋಕ್ಷಗಳೆಂದು ಸಪ್ತ ತತ್ತ್ವಗಳುಂಟು. ಜೀವ – ಚೈತನ್ಯಸ್ವರೂಪಿಯಾದ ಆತ್ಮ (Soul); ಅಜೀವ – ಅಚೇತನವಾದ ಜಡವಸ್ತು (Matter); ಪಾಪ ಪುಣ್ಯಗಳೆಂಬ ಕರ್ಮಗಳ ಬರುವಿಕೆಯೇ ಆಶ್ರವ; ಹಾಗೆ ಬಂದ ಕರ್ಮಗಳು ಆತ್ಮನಲ್ಲಿ ಮಿಳಿತವಾಗುವುದೇ ಬಂಧ; ಹೊಸ ಕರ್ಮಗಳ ಬರುವಿಕೆಯನ್ನು ತಡೆಗಟ್ಟುವುದೇ ಸಂವರ; ಇದ್ದ ಕರ್ಮಗಳ ನಾಶವೇ ನಿರ್ಜರೆ; ಈ ನಿರ್ಜರೆಯಲ್ಲಿ ಸವಿಪಾಕ, ಅವಿಪಾಕಗಳೆಂಬ ಭೇದಗಳುಂಟು. ಕರ್ಮಗಳು ತಾವಾಗಿ ಫಲಕೊಟ್ಟು ಅಳಿಯುವುದು ಸವಿಪಾಕ ನಿರ್ಜರೆ; ಕರ್ಮಗಳನ್ನು ನಾವಾಗಿಯೇ ತಪಸ್ಸಿನ ಆಚರಣೆಯಿಂದ ಅವು ಫಲ ಕೊಡುವ ಮುನ್ನ ನಾಶ ಮಾಡುವುದು ಅವಿಪಾಕ ನಿರ್ಜರೆ; ಹೀಗೆ ಪಾಪವನ್ನು ನಾಶಮಾಡಬೇಕು. ಪುಣ್ಯವು ಸ್ವರ್ಗಸುಖವೇ ಮೊದಲಾದುವುಗಳನ್ನು ಕೊಟ್ಟು ಅಳಿಯುವುದು. ಹೀಗೆ ಪಾಪ ಪುಣ್ಯಗಳಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಿ ಆತ್ಮನು ಅನಂತಜ್ಞಾನ, ದರ್ಶನ, ವೀರ್ಯ, ಸುಖಗಳನ್ನು ತಳೆದು, ಜ್ಞಾನ ಸ್ವರೂಪಿಯಾಗಿ, ಜನನ ಮರಣಗಳನ್ನು ನೀಗಿ, ಲೋಕದ ತುತ್ತತುದಿಯಲ್ಲಿ ನಿತ್ಯಾನಂದವನ್ನನುಭವಿಸುತ್ತ ಶಾಶ್ವತವಾಗಿ ನೆಲಸಿರುವುದೇ ಮೋಕ್ಷ.



ಸಮವಸರಣದಲ್ಲಿ ವಿರಾಜಮಾನರಾಗಿರುವ
ಭಗವಾನ್ ಶ್ರೀ ಆದಿನಾಥಸ್ವಾಮಿಯವರು

ಓಂ

ಶ್ರೀ ವೀತರಾಗಾಯ ನಮಃ

# ಕನ್ನಡ ಭಕ್ತಾಮರ ಸ್ತೋತ್ರ

## ಭಾಮಿನಿ ಷಟ್ಪದಿ

೧

ಭಕುತ ಬೃಂದಾರಕರ ಮಣಿದಾ ।
ಮುಕುಟ ರತುನಕೆ ಹೊಳಪನೀಯುವ ।
ಸಕಲ ಕರ್ಮಂಗಳನು ದಹಿಸುತ ಯುಗದ ಮೊದಲಿನಲಿ ॥
ಶಕುತಿಗುಂದಿದ ಜನತೆ ನಿವಹಕೆ ।
ಯುಕುತಿಯರಿವಿನ ಸೊಡರಿನಿಂದಲಿ ।
ಮುಕುತಿ ಗೇಹದ[1] ಸೊಬಗದೋರಿದ ಜಿನನ ಪದಕೆರಗಿ ॥

೨

ಸಕಲ ನುಡಿಗಳ[2] ತತ್ತ್ವದರಿವಿನ ।
ನಿಕರಕಾಗರಮಾದ ಬುದ್ಧಿಯಿ ।
ನಖಿಳ ಸುರಪತಿವೃಂದ[3] ಲೋಕದ ಬಗೆಯನಪಹರಿಪ ॥
ಬಗೆಬಗೆಯ ತುತಿ[4]ಯಿಂದ ಜಿನಪನ ।
ಪೊಗಳಿ ಧನ್ಯತೆ ಪಡೆದರಲ್ಲವೆ ।
ನಿಗಮ ಕೋವಿದನಾದಿಜಿನನನು ಭಜಿಸಲೆನ್ನಳವೆ[5] ॥

---

1 ಗೇಹ = ಮನೆ; ನಿಲಯು. 2 ನುಡಿಗಳ = ಭಾಷೆಗಳ. 3 ವೃಂದ = ಸಮೂಹ. 4 ತುತಿ = ಸ್ತುತಿ. 5 ಎನ್ನಳವೆ = ನನಗೆ ಸಾಧ್ಯವೆ.

೩

ವಿಬುಧ ಮಣಿಗಳ ಪೂಜೆ ಪಡೆದಾ ।
ಶುಭದ ಪಾದಾಂಘ್ರಿಗಳ ಪೊಂದಿ ।
ಪ್ರಭವನೀ ಕೀರ್ತನೆಯ ಗೆಯ್ಯಲ್ಕುಜ್ಜುಗಿತನಾದ ॥
ಅಬುಧ ನಾನೆಂತಿರ್ಪೆನೆಂದೊಡೆ ।
ನಭದೊಳಿರ್ಪಿಂದುವಿನ ಬಿಂಬವ ।
ಸುಭಗದಿಂ[1] ನೀರಿಂದ ಪಡೆದಪೆನೆಂಬ ಬಾಲನೊಲು ॥

೪

ಗುಣಸಮುದ್ರನೆ ನಿನ್ನ ಗುಣಗಳು ।
ದಣಿವನಾರಿಪ ಚಂದ್ರಕಿರಣ ।
ಕ್ಕೆಣೆಯುಮವುಗಳನೆಣಿಕೆ ಮಾಡಲ್ಕರಿದು ಸುರಗುರುಗೆ ॥
ಪೆಣೆದು ಮೊಸಳೆಗಳಿಂದ ಲೋಕದ ।
ಕೊನೆಯ ಗಾಳಿಯ ಹೊಡೆತದಿಂದಲಿ ।
ಕೊನೆದು[2] ಕೂಗುವ ಕಡಲ ಕೈಯಿಂದೀಜಲಸದಳವು ॥

೫

ಜಗದ ಮಹಿಮಾದರ್ಶ ನಿನ್ನಯ ।
ಸುಗುಣಗಾನವಮಾಳ್ಪ ಶಕ್ತಿಯು ।
ವಿಗತಮಾದರು ಭಕ್ತಿಭರದಿಂ ಪೊಗಳ್ವೆನೆಂತೆನಲು ॥
ಬಗೆಗೆ ತಾರದಲಲ್ಪ ಬಲಮಂ ।
ಮಗುವ ಕಾಪಿಡಲೆಳಸಿ ಸಿಂಗದ ।
ಹಗರಣಕೆ[3] ಕಾಲ್ಕೆರೆದು ನಿಲ್ಲುವ ತಾಯಿಹರಿಣಿ[4]ಯೊಲು ॥

---

1 ಸುಭಗದಿಂ=ಸುಲಭವಾಗಿ. 2 ಕೊನೆದು = ವಿಜೃಂಭಿಸಿ; ಮೇಲಕ್ಕೆದ್ದು.
3 ಸಿಂಗದ ಹಗರಣಕೆ = ಸಿಂಹದೊಡನೆ ಯುದ್ಧಕ್ಕೆ. 4 ಹರಿಣ = ಜಿಂಕೆ.

೬

ಪಂಡಿತನು ನಾನಲ್ಲ ವಿಭುವೇ ।
ಪಂಡಿತರ ಪರಿಹಾಸ ಧಾಮನು ।
ಪಂಡಿತರ ಗುರುದೇವ ನಿನ್ನಯ ಭಕ್ತಿ ಹಾಡಿಪುದು ॥
ಉಂಡು ಮಾವಿನ ಚಿಗುರ ಮಧುರವ ।
ಬಂಡನುರೆ[1] ಕೋಗಿಲೆಯು ಗಾನದಿ ।
ಮಂಡನಕೆ[2] ಪಕ್ಕಾದುದ[3]ಲ್ಲದೆ ಮತ್ತೆ ಬೇರೇನು ॥

೭

ನಿನ್ನ ಗುಣಗಳ ಗಾನದಿಂದಲಿ ।
ಮುನ್ನಿನಾ ಜನುಮಗಳ ಪಾಪವು ।
ಸನ್ನುತಾತ್ಮನೆ ತೊಡೆದು ಪೋಪುದು ನಿಮಿಷ ಮಾತ್ರದಲಿ ॥
ನನ್ನಿ[4] ಜಗಮಂ ಪುದಿದ ತಮಮಂ ।
ಪೊನ್ನ ಕಿರಣದ ಸೂರ್ಯಬಿಂಬಂ
ಬನ್ನಪಡಿ[5]ಸೋಡಿಪುದು ಬೆಳಕನು ತುಂಬಿ ಲೋಕದೊಳು ॥

೮

ಈ ತೆರದೊಳರಿತೆನ್ನ ಶಕ್ತಿಯ ।
ತಾತ ನಿನ್ನಯ ಸುಗುಣ ಗಾನವ ।
ನೋತು[6] ಮಾಳ್ಪೆನು ಪೂಜ್ಯ ನಿನ್ನಾಮಹಿಮೆಯಿಂದದು ತಾಂ ॥
ಸಾತಿಶಯ ಪೊಂದುತ್ತ ಸಂತರ ।
ಚೂತ[7]ನಲ್ಮೆಯ ಪಡೆದು ಪೊಳೆವುದು ।
ಪೂತ[8] ನಲಿನೀದಳದಿ[9] ಮುತ್ತನು ಪೋಲ್ವ ನೀರ್ಪನಿಯೋಲ್ ॥

---

1 ಬಂಡನು = ರಸವನ್ನು. 2 ಮಂಡನಕೆ = ಪ್ರಶಂಸೆಗೆ. 3 ಪಕ್ಕಾದುದು = ಅರ್ಹವಾಯಿತು. 4 ನನ್ನಿ = ನಿಜವು. 5 ಬನ್ನಪಡಿಸಿ = ನಾಶಮಾಡಿ. 6 ಓತು = ಪ್ರೀತಿಸಿ. 7 ಚೂತ = ಚಿಗುರಿ ಹರ್ಷದಾಯಕವಾದ. 8 ಪೂತ = ಹೂಬಿಟ್ಟ. 9 ನಲಿನೀ ದಳದಿ = ತಾವರೆಯ ಎಲೆಯಲ್ಲಿ.

೯

ಇರಲಿ ಪಾವನ ನಿನ್ನ ತುತಿಯುಂ ।
ಮೆರೆಗೆ ನಿನ್ನಯ ಚರಿತೆ ಚಿರವುಂ ।
ಪರಿಗೆ ಜಗದಾ ಪಾಪ ನಿನ್ನಯ ಪೆಸರ ಕೀರ್ತನೆಯಿಂ ॥
ಇರಲು ದೂರದಿ ಸೂರ್ಯದೇವನು ।
ಪರಮ ಹರುಷವ ಕೊಡುವ ಕಮಲಕೆ ।
ದುರಿತ ದುಃಖವ ದೂಡಿ ನೀನುಂ ನಲಿಸು ಮನವಿದನು ॥

೧೦

ಗುಣವಿಹೀನರು ನಿನ್ನ ತುತಿಯಿಂ ।
ಗುಣವನಾರ್ಜಿಸಿ ನಿನಗೆ ಸಮನಹ ।
ಗಣನೆ ಪಡೆವರಿಂದೇನುಮಚ್ಚರಿಯಪ್ಪ ಮಾತಲ್ಲ ॥
ಪಣಮನುಳ್ಳವನಾಶ್ರಿತಂಗಂ ।
ಧನಮನೀಯುತ ತನ್ನ ಸರಿಬರೆ ।
ಘನತೆಯೀಯದೊಡವನನಾಶ್ರಯಿಸೇನು ಫಲ ಗುರುವೆ ॥

೧೧

ನಾಕರ[1]ತಿಭಕುತಿಯೊಳು ದರ್ಶಿಪ ।
ಹೇ ಕರುಣಿ ನಿನ್ನನ್ನು ನರನಾ ।
ಲೋಕಿಸುತೆ[2] ಬೇರೊಂದ ದರ್ಶಿಸಿ ತೋಷಿಪನೆ[3] ಜಗದಿ ॥
ಆಕಳೆಯ ಪಾಲ್ಗಡಲ ನೀರನು ।
ಸಾಕು ಸಾಕೆನ್ನುತಲಿ ಕುಡಿದವ ।
ನೇಕಪೇಕ್ಷಿಪನುಪ್ಪು ಕಡಲಿನ ನೀರ ಕುಡಿವುದಕೆ ॥

---

1 ನಾಕರು = ದೇವತೆಗಳು. 2 ಆಲೋಕಿಸುತೆ = ನೋಡುತ್ತ.
3 ತೋಷಿಪನೆ = ಸಂತೋಷಪಡುವನೆ.

೧೨

ವೀತರಾಗನೆ ಆದಿನಾಥನೆ ।
ನೂತನದ ಪರಮಾಣು ಗಣಗಳು ।
ನೂತು ನಿನ್ನೀ ಕಾಂತಿ ರೂಪವ ಮುಗಿಮುವೆಂವೆನಲು ॥
ಸಾತಿಶಯದಿನ್ನೊಂದು ಮೂರ್ತಿಯು ।
ತಾತ ನಿನಗೆಣೆಯಪ್ಪ ರೂಪವ ।
ಭೂತಳದಿ ನೋಳ್ಪಾತನಾವನು ದಿಬ್ಬ್ರವಸಿ[1]ಯುತನಾ ॥

೧೩

ಸುರನರೋರಗ ಭುವಿಯ ಕಣ್ಮನ ।
ಸೆರೆಯುಗೆಯ್ವುದು ನಿನ್ನ ಮೊಗವದು ।
ನಿರುಪಮವು ಮೂಲೋಕದೊಳಗುಂ ಪ್ರೊಳೆವ ಕಾಂತಿಯಲಿ ॥
ಸರಿಯುದಲ್ಲವು ಶಶಕಳಂಕಗೆ ।
ಸೊರಗಿ ಪಗಲೊಳು ತೇಜವಳಿವಗೆ ।
ನಿರುತ ಕುಂದದ ಸೊಡರ ಬೆಳಕಿನ ನಿನ್ನ ಮುಖಪದ್ಮ ॥

೧೪

ಪೂರ್ಣಚಂದ್ರನ ಕಳೆಗಳಿಂ ಸಂ ।
ಪೂರ್ಣ ನಿರ್ಮಲ ನಿನ್ನ ಗುಣಗಣ ।
ವರ್ಣನಾತೀತಂಗಳಾಗಿಯೆ ತುಂಬಿ ಮೂಜಗದಿ ॥
ಆರ್ಣವಕ್ಕಿಂ[2] ಮಿಗಿಲು ಗುಣ್ಪಿಂ[3] ।
ಪೂರ್ಣ ನಿನ್ನಾಶ್ರಯದ ಕತದಿಂ ।
ಗೂರ್ಣಿಸುತ್ತಿಹ[4]ವಿಷ್ಟವಿಧ್ವಂಶಾವಗುಂ ಮೆರೆದು ॥

---

1 ದಿಬ್ಬದನಿ = ದಿವ್ಯಧ್ವನಿ. 2 ಅರ್ಣವಕ್ಕಿಂ = ಸಮುದ್ರಕ್ಕಿಂತ. 3 ಗುಣ್ಪಿಂ = ಆಳದಲ್ಲಿ. 4 ಗೂರ್ಣಿಸುತ್ತಿಹವು = ಎಲ್ಲೆಲ್ಲೂ ಓಡಾಡಿ ಶಬ್ದಮಾಡುತ್ತಿವೆ.

೧೫

ದೇವವನಿತಾ ರೂಪವ್ಯೈಖರಿ ।
ದೇವದೇವೋತ್ತಮನೆ ನಿನ್ನಯ ।
ಭಾವವೈಕಲ್ಪ್ಯವನು ಪುಟ್ಟಿಸಲಿಲ್ಲವೆಂದೆನಲು ॥
ಆವನಚ್ಚರಿಪಡುವ ಕೊನೆಯಲಿ ।
ಸಾವನುರ್ವಿಗೆ[1] ತರುವ ಸುಟ್ಟುರಿ[2] ।
ನೋವತರಲಾಪುರ್ವುದೆ ಮಂದರಕೆ[3]ತರ ಗಿರಿಗಳೊಲು ॥

೧೬

ಪರಮಪಾವನ ಜೋತಿ[4]ರೂಪನೆ ।
ನಿರುಪಮವು ನಿನ್ನೀ ಪ್ರಕಾಶವು ।
ಸೊರಗದದು ತಾಂ ಬತ್ತಿತೈಲಮುಮೆರಡುಮಿಲ್ಲದೆಯುಂ ॥
ಉರಿವುದೆಲ್ಲಾ ಕಾಲದೊಳಗುಂ ।
ಪರಿಸಿ ಬೆಳಕನು ಮೂರು ಲೋಕದೊ ।
ಳರರೆ ನಂದದು ಗಿರಿಯನುರುಳಿಪ ಕೊನೆಯ ಮಾರುತಕೆ ॥

೧೭

ನಿನ್ನ ಬೆಳಕಿಂಗಸ್ತಮಿಲ್ಲವು ।
ತಿನ್ನಲಾರದು ರಾಹುವದನಂ ।
ಚೆನ್ನ ಬೆಳಗುವೆ ಮೂರು ಲೋಕವನೇಕ ಕಾಲದೊಳು ॥
ಬನ್ನಪಡುವಾ ಸೂರ್ಯರಶ್ಮಿಗೆ ।
ಪೊನ್ನ ಬೆಳಕಿದು ಸಾಟಿಯಪ್ಪುದೆ ।
ನನ್ನಿ ನಿನ್ನೀ ಬೆಳಕ ಮೇಘವು ಮಬ್ಬುಮಾಡದಲಾ ॥

---

1 ಉರ್ವಿಗೆ=ಭೂಮಿಗೆ. 2 ಸುಟ್ಟುರಿ = ಬಿರುಗಾಳಿ. 3 ಮಂದರಕೆ=ಮಹಾ ಮೇರು ಪರ್ವತಕ್ಕೆ. 4 ಜೋತಿ=ಜ್ಯೋತಿ; ದೀವಿಗೆ, ಸೊಡರು.

೧೮

ಅನವರತಮೇಳ್ಗೆಯೊಳಗಿರ್ಪುದು ।
ಮುನಿದು ಕೊಲ್ವುದು ಮೋಹ ತಿಮಿರವ ।
ನನುಪಮನೆ ತಾಂ ರಾಹುವದನಕೆ ಮುಗಿಲಿನೊಡ್ಡಣೆಗೆ[1] ॥
ಘನತೆಯಾಸುತೆ ನಿಲುಕದಿರ್ಪುದು ।
ಜನತೆಯರಿಯದ ಚಂದ್ರಬಿಂಬವು ।
ಕನಕದಂತೆಯೆ ಪೊಳೆಯುತಿರುವುದು ನಿನ್ನ ಮುಖಕಮಲಂ ॥

೧೯

ಸ್ವಾಮಿ ನಿನ್ನ ಮುಖಾಬ್ಜ ಶಶಿಯಿಂ ।
ದಾ ಮಹಾಕತ್ತಲೆಯು ಪಾರಲು ।
ಸೋಮನಿಂದೇಂ ಕಾರ್ಯ ರಜನೀಕಾಂತ ಪೆಸರೇಕೆ ॥
ಧಾಮನಿಧಿಯುಂ[2] ಸೂರ್ಯನೆಂಬಾ ।
ನಾಮವೇತಕೆ ನಿನ್ನ ದಯೆಯಿಂ ।
ಭೂಮಿ ಬೆಳೆಯಿಂ ತಣಿದಿರಲು ಮೇಘಗಳು ತಾವೇಕೆ ॥

೨೦

ಅರುಹ ಕೇವಲಜ್ಞಾನ ನಿನ್ನದು ।
ಪರಮ ತೇಜದಿ ಪೊಳೆಯುತಿರುವುದು ।
ಪರರ ಜ್ಞಾನಮದೆಲ್ಲ ಕೇವಲದಂತೆ ಪೊಳೆಯುವುದೇ ॥
ವರ ರತುನ ಕಾಂತಿಯದು ಗಣ್ಯವು ।
ಪರಿಪರಿಯೊಳುಂ ಮಿಸುಪ ಗಾಜಿನ ।
ಮೆರಗು ರನ್ನದ ಪೊಳಪಿಗೆಣೆಯೇ ಪೇಳು ಯೋಗೀಂದ್ರ ॥

---

[1] ಒಡ್ಡಣೆಗೆ=ಸಮೂಹಕ್ಕೆ. [2] ಧಾಮನಿಧಿ=ಪ್ರಕಾಶ ಭಂಡಾರ.

೨೧

ಗುರುವೆ ನಿನ್ನಿಂ ಮುನ್ನಮಿತರರ ।
ವರುಶನವು ಮೇಲೆಂದು ತಿಳಿವೆನು ।
ಪರಮ ನಿನ್ನನು ತಾಳ್ದ ಮನವದು ಪೆರರಿಗಾಟಿಸದು[1] ॥
ಪರಿಪರಿಯ ಭವಗಳಲಿ ದೇವನೆ ।
ಸುರವಿನುತ ನೀನಲ್ಲದಿತರರು ।
ಸೆರೆಯ ಮಾಡರು ಮನವನಾದಿಜಿನೇಶ ಯೋಗೀಂದ್ರ ॥

೨೨

ಜಗದೊಳಿನಿಬರೊ ಪೆಣ್ಗಳಿರುತಿಹ ।
ರಗಣಿತದ ಸುತರುಗಳ ಪಡೆವರು ।
ನಿಗಮ ಕೋವಿದ ನಿನ್ನ ಸಾಟಿಯನಾರು ಪಡೆವರಲಾ ॥
ಗಗನಮಣಿಯಂ ಪಡೆವ ಭಾಗ್ಯವು ।
ಮುಗುಧೆ ಮೂಡಲ ರಮಣಿಗಲ್ಲದೆ ।
ಮಿಗುಲ[2] ದಿಕ್ಕುಗಳೆಲ್ಲ ತಾರಾನಿವಹಮಂ ಪಡೆವರ್ ॥

೨೩

ಮುನಿಗಳೊಡೆಯನೆ ಯೋಗಿಜನರುಂ ।
ಘನತಮದ ಮುಂದಿರ್ಪ ಸೂರ್ಯನ ।
ಮಿನುಗುವಾ ಹೊಂಬಣ್ಣದಂದದಿ ನೀನು ಪೊಳೆಯುತಿರೆ ॥
ಸನುಮತಿಯು ಪಾವನನು ನೀನೆಂ ।
ದೆನುತ ನಿನ್ನ ಪದಾಬ್ಜ ಪೂಜೆಯಿ ।
ನನುಪಮದ ಕೈವಲ್ಯಲಕ್ಷ್ಮೀ[3]ಪತಿಗಳಾಗುವರು ॥

---

1 ಅಟಿಸದು = ಅಪೇಕ್ಷೆಪಡುವುದಿಲ್ಲ. 2 ಮಿಗುಲ = ಮಿಕ್ಕ, ಉಳಿದ.
3 ಕೈವಲ್ಯಲಕ್ಷ್ಮೀ = ಮೋಕ್ಷಸಂಪತ್ತು.

೨೪

ನಾಶರಹಿತನು ವಿಭುವು ನೀನುಂ ।
ಬಾಸೆ[1]ಗಡಕದ ತಿಳಿವಿ[2]ನಾಗರ ।
ಸಾಸಿರಕೆ ಸಾಸಿರವಸಂಖ್ಯೆಯ ಗುಣದ ಧಾಮನಿಧಿ ॥
ಭೂಷಣನು ಜಗಕಾದಿಗುರು ನೀ ।
ನೀಶ[3] ಬೊಮ್ಮನು[4] ವಿಷ್ಣು ಮನ್ಮಥ ।
ಸಾಕ್ಷಿಗನು ಯೋಗೀಶನೇಕನನೇಕನರಹಂತ ॥

೨೫

ದೇವಪೂಜಿತನರಿವಿನಾಗರ ।
ಭಾವಿಸಲು ನೀನಲ್ತೆ ಬುದ್ಧನು ।
ನೋವನಾರಿಸಿ ಮೂರುಲೋಕಕ್ಕೀಶನೆಂದೆನಿಸಿ ॥
ಪಾವನದ ಮಾಮುಕುತಿ[5] ಬಟ್ಟೆಯ[6] ।
ನೀವನಲ್ಲವೆ ನೀನು ಬೊಮ್ಮನು ।
ಕಾವೆ[7] ಮೂಲೋಕವನು ವಿಷ್ಣು ಮಹಾತ್ಮ ನೀನೆನಿಸಿ ॥

೨೬

ಮೂರು ಲೋಕದ ದುಃಖಮೂಲದ ।
ಬೇರ ಕಿತ್ತನೆ ನಿನಗೆ ನಮಿಪೆನು ।
ಭೂರಿಭೂಷಣ ಭುವನ ಮೂರಕ್ಕಧಿಪ ನಮಿಪೆನಲಾ ॥
ತಾರಕ ಭವೋದಧಿಗೆ ನಮಿಪೆನು ।
ಮಾರವಿಜಯನೆ ಗುರುವೆ ನಮಿಪೆನು ।
ಸಾರ ದಯೆಯನ್ನೊರೆದ ಶಾಂತನೆ ಕರುಣಿ ನಮಿಪೆನಲಾ ॥

---

1 ಬಾಸೆ=ಭಾಷೆ. 2 ತಿಳಿವು=ಜ್ಞಾನ. 3 ಈಶ=ಈಶ್ವರ. 4 ಬೊಮ್ಮ=ಬ್ರಹ್ಮ. 5 ಮಾಮುಕುತಿ = ಮಹಾಮುಕ್ತಿ. 6 ಬಟ್ಟೆಯು = ದಾರಿಯನ್ನು. 7 ಕಾವೆ = ಕಾಯುವೆ; ಪೊರೆಯುವೆ.

೨೭

ಮುನಿಗಳೊಡೆಯನೆ ನೀನು ಖನಿಯಾ[1] ।
ಮಿನುಗುವತಿಶಯ ಗುಣಸಮೂಹಕೆ ।
ಸನುಮತಿಯೆ ಜಗಕಿಲ್ಲವಚ್ಚರಿ ಸಹಜ ವಚನವಿದು ।
ಜನರ ಮೂಜಗದನುವ ಪಡೆದಾ ।
ಘನ ತಮದ ರಾಗಾದಿ ಕರ್ಮಗ ।
ಳನಿತುವುಂ ಬಳಿಸಾರಲಸವಳ ನಿನ್ನ ಸನಿಯತಕೆ[2] ।

೨೮

ಉನ್ನತಾಶೋಕ[3]ದಾತರುವಿನ ।
ಸನ್ನಿಹಿತವಾಗುತ್ತ ಪ್ರೋಳೆಯುವ ।
ಪೊನ್ನಬೆಳಕಿನ ಕಿರಣ ಪೊಂದಿಹ ರವಿಯ ಬಿಂಬವದು ।
ಮುನ್ನ ಪೊರ್ದಿದ ತಮವನೆಲ್ಲವ ।
ಬನ್ನಪಡಿಸುತ ಮುಗಿಲನಟ್ಟುತ ।
ಚೆನ್ನ ಕಳೆಯಿಂ ಬೆಳಗುವಂದದಿ ನಿನ್ನ ಮುಖತೇಜಂ ॥

೨೯

ರತ್ನಕಾಂತಿ ಜ್ವಾಲೆಯಿಂದಂ ।
ಸ್ತುತ್ಯಮಾದಾ ಸಿಂಹಪೀಠದಿ ।
ಚಿತ್ರರದ ಕಳೆತೀವಿದೌದಾರಿಕದ ದೇಹ[4]ವದು ॥
ಭಿತ್ತಿ[5] ಮೂಡಣ ಬೆಟ್ಟು[6] ತುದಿಯೊಳು ।
ಪೊತ್ತು ಕಾಂತಿಯ ಕಿರಣಗಣಮಂ ।
ಸುತ್ತ ಕದಿರನು[7] ಹರಿಪ ರವಿಯಂದದವಲಿ ಬೆಳಗುವುದು ॥

---

1 ಖನಿಯು = ಗಣಿಯು. 2 ಸನಿಯತಕೆ = ಸಮೀಪಕ್ಕೆ. 3 ಅಶೋಕತರು = ದೇವವೃಕ್ಷ. 4 ಔದಾರಿಕ ದೇಹ = ತೀರ್ಥಂಕರ ಪರಮದೇವರಿಗಿರುವ ಪೊನ್ನ ಕಾಂತಿಯ ದಿವ್ಯಶರೀರ. 5 ಭಿತ್ತಿ = ದಿಕ್ಕು. 6 ಬೆಟ್ಟು = ಬೆಟ್ಟ. 7 ಕದಿರನು = ಕಿರಣಗಳನ್ನು.

೩೦

ಕುಂದ ಕುಸುಮದೊಲೆಸೆವ ಚಾಮರ ।
ವೃಂದದಿಂದೊಪ್ಪುತಿಹ ನಿನ್ನಯ ।
ಸುಂದರಾಕೃತಿ ಪೊನ್ನ ಕಳೆಯಿಂ ಪೊಳೆವುದೆಂತೆನಲು ॥
ಇಂದು ಬೆಳಕಿಂ[1]ದೆಸೆವ ನೀರಿನ ।
ಮಂದಗತಿಯಾ ಝುರಿಯ[2] ತಾಳುತ ।
ನಿಂಧಿರುವ ಪೊಂಬೆಟ್ಟು ಮೇರುವಿ[3]ನಮರ ಕಾಂತಿಯೊಲು ॥

೩೧

ಸಮವಸರಣದ[4] ಚಂದ್ರಕಾಂತಿಯ ।
ವಿಮಲ ಮುಕ್ತ್ಯೊಡೆಯುನ್ನತಿ ಸ್ಥಿತ ।
ಮುಕುಲ ಭಾನು ಪ್ರಕಾಶ ದೀಪ್ತಿಯ ಮುತ್ತಿನಂತೆಸೆದು ॥
ಸುಮನಸಾಧಿಪ ಮುಕುತಿಯೊಲ್ಲಭ ।
ನಮಿತ ತೇಜನೆ ನೀನು ಮೂಜಗ ।
ನಮಿತವಿಭುವೆಂದೆನಿಪ ಕೀರ್ತಿಯು ಬೆಳಗಿ ಪೊಳೆಯುವುದು ॥

---

1 ಇಂದುಬೆಳಕಿಂ = ಬೆಳ್ದಿಂಗಳಿಂದ. 2 ಝುರಿ = ನದಿ. 3 ಪೊಂಬೆಟ್ಟು ಮೇರು = ಕನಕಗಿರಿಯಾದ ಮಹಾಮೇರು ಪರ್ವತ. 4 ಸಮವಸರಣ = ದೇವ ನಿರ್ಮಿತ ನಗರ — ಶ್ರೀ ತೀರ್ಥಂಕರ ಪರಮದೇವರಿಗೆ ಕೇವಲಜ್ಞಾನೋತ್ಪತ್ತಿಯಾದ ಕೂಡಲೆ ಸ್ವಾಮಿಯ ಪರಮ ತೇಜಃಪುಂಜವಾದ ದೇಹವು ಆಕಾಶಕ್ಕೇರುವುದು. ಅಂದರೆ ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯವೆಂಬ ನಾಲ್ಕು ಘಾತಿಕರ್ಮಗಳು ನಾಶವಾದನಂತರ ಶ್ರೀ ಸ್ವಾಮಿಗೆ ಕೇವಲಜ್ಞಾನ (ಸರ್ವಜ್ಞತ್ವ)ವೂ ಪರಮೌದಾರಿಕ ದಿವ್ಯಶರೀರ (ರಕ್ತಮಾಂಸ ರಹಿತವಾದ ಶರೀರ)ವೂ ದಿವ್ಯಧ್ವನಿಯೆಂಬ ಓಂಕಾರ ಸ್ವರವೂ ತಾವಾಗಿ ಉದಯಿಸುವುವು. ಅಂತಹ ಸ್ವಾಮಿಯ ಸುತ್ತಲೂ ದೇವೇಂದ್ರನ ಅಪ್ಪಣೆಯಂತೆ ಕುಬೇರನು ಒಂದು ದೇವನಗರವನ್ನು ನಿರ್ಮಿಸುವನು. ಶ್ರೀ ಸ್ವಾಮಿಯ ತೀರ್ಥಪ್ರವಾಸದಲ್ಲಿ ಈ ನಗರಿಯೂ ಆಕಾಶದಲ್ಲಿ ಸಂಚರಿಸುವುದು.

೩೨

ದೇವದುಂದುಭಿ ಮೊಳಗು ನಿನ್ನಂ ।
ಭೂವಿನುತ ಗುರುವೆಂದು ಲೋಕಕೆ ।
ತೀವಿದಾ ದನಿಯಿಂದ ಬಾಂಬೊಳಲಲ್ಲಿ[1] ಸಾರುತಿದೆ ॥
ನೋವಿನಿಂ ತಲ್ಲಣಿಪ ಜನತೆಯ ।
ಕಾವನಿವ ಸದ್ಧರ್ಮರಾಜನು ।
ಪಾವನಾತ್ಮಕ ಸಿದ್ಧನೆಂಬುದನರುಪಿ ಡಂಗುರದಿ ॥

೩೩

ದೇವ ನಿನ್ನಯ ದಿಬ್ಯದನಿ[2]ಯಿಂ ।
ನೋವನಾರಿಪ ವಚನ ಸುಮಗಳು ।
ತೀವಿ[3] ತತ್ತ್ವಾರ್ಥವನು ಧರಣಿಗೆ ಸುರಿಯುತಿಹುವೆಂತು ॥
ಪಾವನದ ಸುರ ತರುಗಳಿಂದಲಿ ।
ಪೂವ ಕಂಪನು ತಾಳಿ ಮಾರುತ ।
ನಾವಿನುತದಾಕಾಶದಿಂದಲಿ ಧರೆಗೆ ಬೀಳ್ವವೊಲು ॥

೩೪

ವಿಭುವೆ ನಿಮ್ಮಯ ಪರಮ ಕಾಂತಿಯು ।
ಸೊಬಗಿನಿಂ ಮೂಲೋಕದೊಳಗಂ ।
ಪ್ರಭೆಯ ಬೀರುತ ಪೊಳೆಯುತಿರುವದನಂತ
ಸೂರ್ಯರೊಲು ॥
ಅಭವ ನಿನ್ನಯ ಕಾಂತಿ ಸೌಮ್ಯವು ।
ಸುಭಗದಿಂ ಶೈತ್ಯವನು ತೋರ್ಪುದು ।
ಶುಭವು ನಿನ್ನಯ ಕಾಂತಿಯರಿಯಮೆ[4] ತಮವ-
ನೋಡಿಪುದು ॥

---

1 ಬಾಂಬೊಳಲಲ್ಲಿ = ಆಕಾಶನಗರಿಯಾದ ಸಮವಸರಣದಲ್ಲಿ. 2 ದಿಬ್ಯದನಿ = ದಿವ್ಯಧ್ವನಿ. 3 ತೀವಿ = ತುಂಬಿಕೊಂಡು. 4 ಅರಿಯಮೆ = ಅಜ್ಞಾನ.

೩೫

ಮುಕುತಿ ಸಗ್ಗವ ಬಯಸುವವರಿಂಗೆ ।
ಯುಕುತಿ ಮಾರ್ಗವ ತೋರ್ಪ ನಿನ್ನಾ ।
ಶಕುತಿ ದಿವ್ಯಧ್ವನಿಯು ಮೂಲೋಕದೊಳಗನುಪಮವು ॥
ಭಕುತಿಯಿಂದಿದ ಕೇಳುವಾತ್ಮರ ।
ವಿಕಳಮತಿಯನ್ನಳಿಸಿ ಧರ್ಮದ ।
ಸಕಲ ತತ್ತ್ವಾರ್ಥಗಳ ಬೋಧಮನಿತ್ತು ಪಾಲಿಪುದು ॥

೩೬

ನಿನ್ನ ಪಾದದ್ವಯದ ನಖಗಳು ।
ಪೊನ್ನ ತಾವರೆ ಪುಂಜ ಸದೃಶವು ।
ಚೆನ್ನ ನೀನಡಿಯಿಟ್ಟ ತಾಣದಿ ದೇವವೃಂದಗಳು ॥
ಉನ್ನತದ ಭಕುತಿಯೊಳು ಸತತಂ ।
ರನ್ನ ಕಮಲಂಗಳನು ರಚಿಪರು ।
ಸನ್ನುತನೆ ಜಗದಾದಿದೇವನೆ ಪರಮ ಪಾವನನೆ ॥

೩೭

ಜಿನನೆ ನಿನ್ನುಪದೇಶಮಾರ್ಗದ ।
ಘನತೆ ಮತ್ತೊಬ್ಬನಿಗೆ ಬರ್ಪುದೆ ।
ದಿನಕರನ ನವ ತೇಜ ಮಹಿಮೆಯನಿತರ ಗ್ರಹಗಣವು ॥
ಕನಸಿನೊಳಗುಂ ಪೊಂದಲಸದಳ ।
ವನುಪಮನೆ ದಯೆ ಶಾಂತಿ ಶೀತಳ ।
ಮಿನುಗುವಾ ಗುಣವಾರ್ಧಿಚಂದ್ರನೆ ತ್ರಿಜಗವಂದಿತನೆ ॥

೩೮

ಸ್ರವಿಪ ಮದಜಲ ಧಾರೆ ಕಂಪಿಗೆ ।
ಕವಿದು ಬಂದೆರಗುತಿಹ ದುಂಬಿಯ ।
ರವವನಾಲಿಸಿ ಕೋಪವಾಸುತೆ[1] ಪವನ ವೇಗದೊಳು ॥
ದಿವದ ವಿಭು[2]ವೈರಾವತವೊಯೆನೆ ।
ಜವನ ತೆರದಿಂ ಬರ್ಪ ಗಜದಿಂ ।
ಲವಣದಂಶವು ಭಯವು ತೋರದು ನಿನ್ನ ಭಕುತರಿಗೆ ॥

೩೯

ಗಜದ ಗಂಡಸ್ಥಳವ ಸೀಳುತ ।
ಲಜಿತ ವಿಕ್ರಮ ಸಿಂಹರಾಜನು ।
ಗಜರಿ ಗರ್ಜಿಸಿ ರೋಷದಿಂ ಮಿಗೆ ಹಾರಿ ಬರುತಿರ್ದು ।
ವಿಜಯ ಮಹಿಮಾದರ್ಶ ನಿನ್ನನು ।
ಭಜಿಪ ಭಕುತರನೆದುರುಗೊಳ್ಳಲು ।
ಸುಜನರೊಲು ಶಾಂತಿಯನು ಪಡೆವುದು ನಿನ್ನಮಹಿಮೆಯಲಾ॥

೪೦

ಪ್ರಳಯಕಾಲದ ಗಾಳಿ ಹೊಡೆತದಿ ।
ಝುಳಿತ[3]ಮಾಗುಗುಳುತ್ತ ಕಿಡಿಗಳ ।
ತಳಮಳಿಸಿ ಲೋಕವನು ತನ್ನಯ ಬೆಂಕಿ ಬೇನೆಯಲಿ ॥
ಕಲಿಯುಗದ ವಿಶ್ವವನು ನುಂಗಲು ।
ಘಳಿಲನೈದುವ ಕಾಡುಕಿಚ್ಚದು ।
ಮಲಿನಮಪ್ಪುದು ನಿನ್ನ ಕೀರ್ತನ ಜಲದಿ ನಿಶ್ಶೇಷಂ ॥

---

1 ಕೋಪವಾಸುತೆ = ಕೋಪವನ್ನು ಹೊಂದುತ್ತ. 2 ದಿವದ ವಿಭುವ = ಸ್ವರ್ಗಾಧಿಪತಿಯು ; ದೇವೇಂದ್ರನ. 3 ಝುಳಿತ = ಜ್ವಲಿತ.

೪೧

ಕೋಪದಿಂ ಕೆಂಪಾದ ಕಣ್ಣಿಂ ।
ತಾಪದಿಂ ಕರಿದಾದ ಮೆಯ್ಯಿಂ ।
ಧೂಪದಂತಿರ್ಪುಸಿರ ಸುಯ್ಯನೆ ಸುಯ್ದು ಬರುತಿರ್ಪ ॥
ಆ ಫಣಿಪನಗಲಿರ್ದ ಹೆಡೆಯಿಂ ।
ಪಾಪನಾಶಕಮಾದ ನಿನ್ನಯ ।
ರೂಪನೆದೆಯಲಿ ಪೊಂದಿ ತುತಿಪನು ಮೆಟ್ಟ ತುಳಿಯುವನು ॥

೪೨

ತುರಗ ಹೇಷಾರವದೊಳಾನೆಯ ।
ಪರಿಪರಿಯ ಘೀಂಕಾರ ದನಿಯಿಂ ।
ಮೆರೆದು ಬಹ ಶತ್ರುಗಳ ಸೈನ್ಯವು ನಿನ್ನ ಕೀರ್ತನೆಯಿಂ ॥
ತ್ವರಿತದಿಂದಲಿ ಲಯಿಸಿ ಪೋಪುದು
ತರಣಿ ಕಿರಣವ ಕಂಡ ತಮದೊಲು ।
ಪರಮ ಕರುಣಾಸಿಂಧು ಜಿನಪನೆ ಪುರುಜಿನೇಶ್ವರನೆ ॥

೪೩

ಘರ್ಜಿಯುರಿತದಿನೊಡೆದ ಗಜದಾ ।
ಪಜ್ಜಳಿಪ ತಲೆಯಿಂದ ಸ್ರವಿಸು ।
ತ್ತೂರ್ಜಿತದ ರಕ್ತಪ್ರವಾಹದೊಳಿಳಿದು ದಾಂಟಲು ತಾ ॥
ವುಜ್ಜುಗಿಪ ಭಟರಿಂದ ಭೀಕರ ।
ಸಜ್ಜಿನಿಂದಿಹ ಘೋರ ಶತ್ರುಪ ।
ಸಜ್ಜನಾಶ್ರಯ ನಿನ್ನ ಭಕುತರು ನಾಶಮಾಡುವರು ॥

*

೪೪

ಕ್ರೂರ ನಕ್ರ ತಿಮಿಂಗಿಲಗಳಿಂ ।
ಭೂರಿ ಮಾರುತ ಹೊಡೆತದಿಂದಲಿ ।
ಕಾರಿ ಕೋಪದ ಹೊಗೆಯ ಮಿಗೆ ಬಡಬಾಗ್ನಿಯಿಂ ತಳೆದು ॥
ಮೇರೆಯಿಲ್ಲದ ಕಡಲ ಮಡಿಲೊಳು ।
ಸಾರುತಿಹ ನಾವಿಕರ ಗಡಣವು ।
ಕೋರಿ ನಿನ್ನನು ನೆನೆಯೆ ಪಾರಾಗುವುದು ವಾರಿಧಿಯಿಂ ॥

೪೫

ಭಯ ಜಲೋದರ ಭಾರದಿಂದಲಿ ।
ಲಯವ ಪೊಂದುತ್ತಿರ್ಪ ಜನರುಂ ।
ಜಯವ ಮರೆತುಂ ಪ್ರಾಣವಾಸೆಯ ನೀಗಿ ಕೊರಗುತಿರೆ ।
ಭಯ ವಿನಾಶಕ ನಿನ್ನ ಪಾದ ।
ದ್ವಯಗಳೆಂಬುವ ಪಂಕಜದ ರಜ[1] ।
ನಯದಿ[2]ನವರಿಗೆ ಮಾರಸುಂದರ ರೂಪನೀಯುವುದು ॥

೪೬

ಕಾಲಿನಿಂ ಕುತ್ತಿಗೆಯ ವರೆಗಂ ।
ಮಾಲೆಯಾ ಸಂಕೋಲೆಯಿಂದಲಿ ।
ಜಾಲಿ ಮುಳ್ಳುಗಳಂತೆ ಬಿಗಿದಾ ದೇಹವನು ತಾಳಿ ॥
ಗೋಳಿಡುತ ಹಿಂಸೆಯನು ಪಡುವರು ।
ಜಾಲಮಾಡದೆ[3] ನಿನ್ನ ನೆನೆಯಲು ।
ಪಾಲಕನೆ ನಿಗಡ[4]ಂಗಳೆಲ್ಲವು ಕಳಚಿ ಬೀಳುವುವು ॥

---

[1] ರಜ = ಧೂಳು. [2] ನಯದಿಂ = ನ್ಯಾಯಾನುಸಾರ (ನಿಜವಾಗಿಯೂ). [3] ಜಾಲಮಾಡದೆ = ತಡಮಾಡದೆ. [4] ನಿಗಡ = ಕಾಲಿಗೆ ಹಾಕುವ ಸಂಕೋಲೆ (ಬೇಡಿ).

೪೭

ಯಾವನೀ ಸ್ತೋತ್ರವನು ಪಾಡುವ ।
ನಾವನಿದನಧ್ಯಯನ ಮಾಡುವ ।
ನಾವಿದುಷಗೊದಗಿದ ಮಹೋದರ[1] ಮಾಯವಾಗುವುದು ॥
ತೀವಿದುಜ್ವಲ ಕಾಡು ಕಿಚ್ಚಿನ ।
ಸಾವುತಹ ಮದ್ದಾನೆ ಸಿಂಗದ ।
ಪಾವು ವಾರಿಧಿಯಂಕ[2] ಭಯಮುಂ ನಾಶಮೈದುವುವು ॥

೪೮

ವಿಭುವೆ ತವ ಗುಣ ಕುಸುಮಮಾಲೆಯ ।
ಸೊಬಗಿನಕ್ಕರ ನೂಲಿನಿಂದಂ ।
ವಿಬುಧ ಕಟ್ಟಿಹ ಮಾನತುಂಗನು ಭಕುತಿ ಭಾವದಲಿ ॥
ಶುಭವ ಕೋರುವ ಭವ್ಯ ಜನರಿದ ।
ವಿಭವದಿಂ ಕಂಠದೊಳು ಧರಿಸಲು ।
ಸುಭಗದಿಂ ಕೈವಲ್ಯಲಕ್ಷ್ಮೀಪತಿಗಳಾಗುವರು ॥

ಓಂ ನಮಃ ಸಿದ್ಧೇಭ್ಯಃ

---

[1] ಮಹೋದರ = ಮಹೋದರವೆಂಬ ಭಯಂಕರ ರೋಗ. [2] ಅಂಕ = ಯುದ್ಧ.

*

# ಶ್ರೀ ಗೋಮಟೇಶ್ವರ ಸ್ತವನ

ಕಂದ

ಭುವಿಯುಂ ಗೆಲ್ದುತಲಣ್ಣನಿಂ ।
ಜವದೊಳುಂ ಚಕ್ರಾಯುಧಂ ತಾಂ ಬರಲ್
ಎವೆಯಿಕ್ಕದೆ ಕಡೆಗಾಣುತಂ
ಭವಿಪಡೆದಾ ಪುಣ್ಯಮೂರ್ತಿ ಬಾಹುಬಲೀಶಂ ॥ ೧ ॥

ರಣರಂಗದಿ ಜಯವಧುವುಂ ।
ಕುಣಿಯುತೆ ಬಂದಪ್ಪಿ ಲೋಲನಾಗದೆಯವಳಂ ॥
ಗಣಿಕೆಯ ತೆರದಿಂ ಕಾಣುತೆ ।
ಗುಣಶಾಲಿಯು ತೊರೆದ ಭುವಿಯ ಬಾಹುಬಲೀಶಂ ॥ ೨ ॥

ಪೌದನ ಪುರದೊಳಗಸಿಬರುಂ ।
ಕಾದಿರ್ದರು ಮದನವಿಜಯದುತ್ಸಾಹದೊಳುಂ ॥
ಪೋದನೆ ನಿಜನಗರಿಗೆ ತಾಂ ।
ಸಾಧಿಸಿದಂ ತಪಮನಯ್ಯನಾಜ್ಞೆಯ ಪಿಡಿಮುಂ ॥ ೩ ॥

ಮೂಜಗ ವಂದಿತ ಭುಜಬಲಿ ।
ತೇಜದೊಳುಂ ರೂಪಲೇಖೆ ಲಾವಣ್ಯದೊಳುಂ ।
ಸೋಜಿಗದೈಸಿರಿಯಂ ತಾಂ ।
ಗಾಜಿನ ಗಿರಿಯಂವದಿಂದೆ ಕಾಣುತೆ ತೊರೆದಂ ॥ ೪ ॥

ಭರತಂ ಪೇಳ್ದೊಡೆ ಕೇಳ್ದನೆ ।
ಅರಸಿಯು ಬಂದಡ್ಡಗಟ್ಟೆ ಮಗುಳ್ದನೆ ತಪಸಿಂ ॥
ವರಮಾತೆಯು ಸಿರಿಗುವರಂ ।
ಕರೆ ಕರೆಪಡುತಳಲುತಿರ್ಕೆ ಪಿಂದಿರುಗಿದನೆ ॥ ೫ ॥

ಭಾಮಿನಿ ಷಟ್ಪದಿ

ಜಗಕೆ ಹಿರಿದಹ ಸಿರಿಯ ತೊರೆಯುತೆ ।
ಬಗೆಗೆ ತಾರದೆ ಮಡದಿ ದುಗುಡವ ।
ಹಗಲೊಳುರಿಯುವ ಬಿಸಿಲ ತಾಪಕೆ ನಿಜ ಶರೀರವನು ॥
ಒಗೆದು ಬಗೆಬಗೆ ಕಷ್ಟಕೊಡ್ಡುತ
ಸೊಗವನೆಲ್ಲವ ದೂಡಿ ದೂರಕೆ ।
ನಿಗಮ ಕೋವಿದನರಸುತಿರುವೆಯ ಮುಕುತಿ ರಮಣಿಯನು ॥

ಗಗನಚುಂಬಿತ ನಿನ್ನ ಸಿರಿ ಶಿರ ।
ಮುಗುಳೆ ಮುಗುಳ್ದವು ಲೋಚನಂಗಳು ।
ಅಘಹರನೆ ಮತ್ತಾರ ನೆನೆಯುವೆ ನಿನ್ನ ಮನಸಿನಲಿ ॥
ಜಗುಳದಿಹೆ ಬಳ್ಳಿಗಳು ಪೆಣೆಯುಲು ।
ಮುಗುಳುನಗೆ ಸರ್ಪಗಳು ಸುತ್ತಲು ।
ಜಗದೊಳಾವುದ ನೆನೆಯುತಿರ್ಪೆಯೊ ವಿಬುಧ ಪೇಳೆನಗೆ ॥ ೭ ॥

ಮನೆಯ ಸಿರಿಯನು ನೆನೆಯುತಿರುವೆಯೊ ।
ಜನವನಾಳುವ ಪರಿಯ ನೆನೆವೆಯೊ ।
ಮನುಜನ್ಮೈಸಿರಿ ಮಿಣುಕು ಹುಳವೆಂದರುಹುತಿರ್ಪೆಯೊ ॥
ಘನನೆ ಪೇಳಿಂತೇಕೆ ಮೌನವು ।
ತನುವ ಬಳಲಿಪ ಪರಿಯಿದಾವುದು ।
ಚಿನುಮಯನೆ ಕೃಪೆದೋರಿ ಪೇಳೆಲೊ ಬಾಹುಬಲಿ ಜಿನಪ ॥

ತಪವ ಪಿಡಿಯುವ ಮುನ್ನ ನಿನ್ನಯ ।
ಕುಪಿತ ಕಾರ್ಯವನೇಕೆಯೊಡ್ಡಿದೆ ।
ಅಪರಸುಖಕೆಂದಖಿಳ ಬಂಧುವ ಮರೆತು ನಿಂದಿಹೆಯಾ ॥

ಉಪಕೃತಿಯ ಗೈದವರ ಮರೆವರೆ ।
ಉಪಟಲವನಿದನಿಷ್ಟು ಸಹಿಪರೆ ।
ಜಪಿಪ ಮಂತ್ರಪದೇನು ತಿಳುಹಿಸೊ ಬಾಹುಬಲಿ ಜಿನಪ ॥

ತಾಯಿ ಕೂಗುತ ಬರ್ಪಳಿದಿಕೋ ।
ನೋಯುತಿರುವಾ ನಲ್ಲೆ ಬರ್ಪಳು ।
ತೋಯಜಾಕ್ಷನು ಪ್ರೀತಿಗುವರನು ನಿನ್ನನರಸುತಿಹ ॥
ರಾಯ ನಿನ್ನಕ್ಷಿಗಳ ತೆರೆಯುತ ।
ಜೀಯಯೆಂಬರಿಗಭಯವೀಯುಲೊ ।
ಮಾಯ ತತ್ತ್ವದ ಪರಿಯನರುಹೆಲೋ ಬಾಹುಬಲಿ ಜಿನಪ ॥

ನಿನ್ನ ಮೊಗವೊಳಗಿನಿಸು ನಗೆಯಿದು ।
ದೆನ್ನ ಮೊರೆಯಿದಕುತ್ತರವೆ ವಿಭು ।
ಸನ್ನುತನೆ ಕತ್ತಲೆಯು ಪೋಪುದು ನಗೆಯ ಬೆಳಕಿಂದ ॥
ಬನ್ನಬಡುತಿಹವಯ್ಯ ಭವದಲಿ ।
ನನ್ನಿಯರಿವೆಯ ಹವನ ತಿಳಿಯದ ।
ಲುನ್ನತಿಯ ದಾರಿಯದು ತೋರಿತು ನಿನ್ನ ದರುಶನದಿ ॥ ೧೧ ॥

ಅಹುದು ನಿನ್ನಯ ನಗುವು ಸತ್ಯವು ।
ಸಹಿಸಲಾರೆನು ಇಹದ ಕಷ್ಟವ ।
ಮಹಿಯ ವೈಮೆಯು ಕನಸ ಗಂಟದು ಹಿರಿಯ ಬೂಟಾಟ ॥
ಅಹಿಯ ವಿಷವಿದ ವರ್ಜಿಸುತ ನೀಂ ।
ಮಹಿಮೆಗಾಗರವಾದ ಮುಕುತಿಯ ।
ಸಹನೆಯಿಂದಾರ್ಜಿಸಿದೆ ಬಾಹುಬಲೀಶ ಯೋಗೀಂದ್ರ ॥ ೧೨ ॥

ಧನ್ಯನವ ಚಾಮುಂಡರಾಯನು ।
ಮಾನ್ಯತೆಯ ಪೊಂದಿಹನು ಜಗವೊಳು ।
ಗುನ್ನತನು ಸಜ್ಜನನು ಧರ್ಮಧುರೀಣರಾಯನವ ॥
ಜೊನ್ನದಂದದ ಜಸವ ಪೊಂದುತ ।
ಚೆನ್ನ ಗೊಮ್ಮಟ ಪೆಸರ ತಾಳ್ದನು ।
ಸನ್ಮುನೀಶನ ನೇಮಿಚಂದ್ರನ ಪದವ ಪೂಜಿಸುತ ॥ ೧೩ ॥

ಬಾಹುಬಲಿ ಗೊಮಟೇಶನಾವನು ।
ಸಾಹಸಿಗ ಚಾಮುಂಡ ಭಕ್ತಸಿಂ ।
ಮೋಹಿಪುದು ಬೆಳ್ಗೊಳದ ಮೂರ್ತಿಯು ಜಗದ ಜನತೆಯನು ॥
ದಾಹಮಿರ್ಪೊಡೆ ಮುಕುತಿ ಸಿರಿಯೊಳು ।
ನೇಹದುನ್ನತಿಯಾಗೆ ಸಿದ್ಧರೊಳ್ ।
ಆಹವವ ಕರ್ಮದೊಳು ಗೆಲ್ಲಲು ಭಜಿಸಿ ಭುಜಬಲಿಯ ॥

# ಶ್ರೀ ವರ್ಧಮಾನ ಮಹಾವೀರ ತೀರ್ಥಂಕರ ಪರಮದೇವರ ಸ್ತವನ*

ನಿನ್ನ ನಾಮ ಮರೀಚಿ ಮಂಜರಿ ಕರ್ಣಭೂಷಣವಾಗಿರೆ ।
ಎನ್ನ ಚಿದ್ಗೃಹದಿಂದ ಕತ್ತಲೆ ಯೋಗಲಾಕ್ಷಣವಾಕ್ಷಣಂ ॥
ನಿನ್ನ ಸದ್ಗುಣ ರತ್ನರಾಶಿಯ ಕಂಡು ಸೋಲ್ತೆನು ಮುಕ್ತಿಯಂ ।
ಮನ್ನಿಸಯ್ಯ ಮಹಾನುಭಾವನೆ ಸಂದ ವೀರಜಿನೇಶ್ವರಾ ॥

ಮುನ್ನ ಮಾಡಿದ ದುಶ್ಚರಿತ್ರದೆ ಹಿಂದೆ ಕೆಟ್ಟುದೆ ಸಾಲದೇ ।
ನಿನ್ನ ಭಕ್ತಿಯು ಪರುಷ ಮುಟ್ಟಿದ ಲೋಹದಂದದೆ ಶುದ್ಧನಾಂ ॥
ನಿನ್ನ ಪಾದ ಸರೋಜಯುಗ್ಮದ ಸೇವೆಯಂ ಬಿಡದಿರ್ಪೆ ನಾಂ ।
ನಿನ್ನ ರೂಪನೆ ಮಾಡು ಬೇಗದಿ ವರ್ಧಮಾನ ಜಿನೇಶ್ವರಾ ॥

— ಅಣ್ಣಾ ಕಳವಿ

### ಕಂದ

ಪುರು ಪರಮೇಶ್ವರರೊರೆದಾ ।
ಪರಮಾಗಮ ತತ್ತ್ವಗಳನು ಜಗದೊಳ್ ಪರಿಸಿ ॥
ಪರಮಾತ್ಮ ಸಿದ್ಧನಾದಂ ।
ವರವೀರಂ ವರ್ಧಮಾನ ತೀರ್ಥೇಶ್ವರನುಂ ॥ ೧ ॥

ಅರಿವಂ ಪರಿಸುತ ಧರೆಯೊಳ್ ।
ತೊರೆಯುತ್ತಂ ರಾಜ್ಯಭೋಗ ಸಿರಿಗಳನೆಲ್ಲಂ ॥
ಚರಿಸುತ ಕಾನನದೊಳಗುಂ ।
ಉರಿಗಿಟ್ಟಂ ಕರ್ಮಗಳನು ವೀರಮಹಾತ್ಮಂ ॥ ೨ ॥

---

* ಬೆಂಗಳೂರು ನಗರದಲ್ಲಿ ನಡೆದ ಶ್ರೀ ಮಹಾವೀರ ಜಯಂತ್ಯುತ್ಸವದಲ್ಲಿ ಹಾಡಿದ ಪದ್ಯಗಳಿವು.

### ಭಾಮಿನಿ ಷಟ್ಪದಿ

ಮಗಧರಾಜ್ಯೇಶ್ವರನ ಮಗನುಂ ।
ಮುಗುಧೆ ತ್ರಿಶಲಾದೇವಿ ಕಂದನುಂ ।
ಸುಗುಣಿ ಸುಕೃತಾತ್ಮಕವೀರನು ವರ್ಧಮಾನನಲಾ ॥
ಅಘವನೆಲ್ಲವ ಗೆಲ್ದ ಧೀರನು ।
ಜಗದೊಳಗ್ಗಳನೆಂಬ ಮಹಿಮೆಗೆ
ಸೊಗದಿ ಪಕ್ವಾಗಿರ್ಪ ವೀರಮಹೇಶ ಸಲಹೆಮ್ಮ ॥ ೭ ॥

### ಸಾಂಗತ್ಯ

ಪಾವಾ ಪುರಿಯ ಜಲನಿಧಿ ಮಧ್ಯದಿ ।
ನೋವಿನ ಕರ್ಮವ ದಹಿಸಿ ॥
ಪಾವನ ಮುಕ್ತಿಗೇರಿದ ಮಹಾಮಹಿಮನು
ಶಿವದನಂತಜ್ಞಾನದೊಳು ॥ ೪ ॥

ಕೊಲಬಾರದೆಂಬುವ ತಿಳಿವನು ಬೋಧಿಸ
ಸುಲಲಿತ ಜಿನಧರ್ಮ ನಿಧಿಯ
ಕಲಿಲಹರನು ವರ್ಧಮಾನ ಜಿನೇಶನು ।
ಕಲಿ ಜನತೆಗೆ ತೋರಿದನು ॥ ೫ ॥

ದಯೆಯೇ ಧರ್ಮವು ದಯೆಯೇ ತತ್ತ್ವವು ।
ದಯೆಯಿಂದ ಮುಕ್ತಿ ಗೋಚರವು ॥
ದಯೆಯಿಂದ ಜೀವ ಸಂತತಿಯ ನೋಡೆನ್ನುತ ।
ದಯಮೂರ್ತಿ ವೀರ ಸಾರಿದನು ॥ ೬ ॥

*

ಧರ್ಮದ ಪೆಸರಲಿ ಕಾದಾಡುತಿರುವರು ।
ಧರ್ಮಕೆ ದ್ರೋಹವ ಬಗೆವರ್ ॥
ಧರ್ಮದ ಮರ್ಮವು ಶಾಂತಿಯೆಂದರಿದರೆ ।
ಧರ್ಮಾತ್ಮರಾಗುವರವರು ॥ ೭ ॥

ಜಿನನೆಂದು ಶಿವನೆಂದು ವಿಷ್ಣುವೆಂದೆನ್ನುತ ।
ಘನದೇವನೊಬ್ಬನ ಕೂಗೆ ॥
ವಿನುತಾತ್ಮ ದೇವಾಧಿದೇವನ ಗುಣಗಳು ।
ಹಸಿಯಂತೆ ಪಾರಿಪೋಗುವುವೆ ॥ ೮ ॥

ಮಾರ ವಿಜಯ ಸಿರಿ ವರ್ಧಮಾನೇಶನು ।
ಸಾರಾತ್ಮ ಶಿವ ಮಹಾದೇವ ॥
ಮೂರುಲೋಕದೊಳಿರ್ಪ ವಿಷ್ಣುದೇವೋತ್ತಮ ।
ಬೀರಲಿ ಜಗಕೆ ಶಾಂತಿಯನು ॥ ೯ ॥

ಖಂಡ ಭೋಗ ಷಟ್ಪದಿ

ಮುನಿಯು ವೀರವರ್ಧಮಾನ ।
ಇಹವ ಗೆಲ್ದ ಮಹಿಮೆ ತಾನ ।
ದಹಿಸಿ ಮೋಹ ಮಾಯೆಯಘವ ।
ಸೊಗವ ಪಡೆವನು ॥
ಸಹಿಸಿ ಕಾಯ ಕಷ್ಟದುರಿಯ ।
ಮುಕುತಿ ಪಡೆದನು ॥ ೧೦ ॥

ವೀರನಾಗಿ ಶಾಂತಿನಿಧಿಯು ।
ಶೂರನಾಗಿ ದಯೆಯ ಗಣಿಯು ।
ಮೂರುಲೋಕಕೊಡೆಯನಾಗಿ ।

ತೀರ ಬಡವನು ॥
ಪಾರುವಾಳ್ಪ ಕರ್ಮದಳಲ ।
ವೀರ ಮಹಿಮನು ॥ ೧೧ ॥

ಜಗದ ಶಾಂತಿಗಾಗಿ ದುಡಿದು ।
ಸೊಗವ ಬಯಸಿ ಜೀವತತಿಗೆ ।
ಹಗೆಯ ಗೆಳೆಯನಂತೆ ಕಂಡ ।
ಸುಗುಣ ವೀರನು ॥
ಗಗನ ಪುರದಿ ಗಮಿಸಿದಾತ ।
ನಿಗಮದಾತನು ॥ ೧೨ ॥

ದಯೆಯ ಬೀರಿ ಮುದುಕವೋರಿ ।
ಭಯಮನೆಲ್ಲ ಕುಟ್ಟಿ ತೂರಿ ।
ನಿಯಮ ನೀತಿಗಳನು ತೋರಿ ।
ಪೊರೆದ ವೀರನು ॥
ಜಯದ ಭೇರಿ ಮೊಳಗಸಿಟ್ಟ ।
ಗುರುವು ವೀರನು ॥ ೧೩ ॥

ಧರ್ಮದಾತ ವರ್ಧಮಾನ ।
ಕರ್ಮವಿಜಯಿ ವರ್ಧಮಾನ ।
ನಿರ್ಮಲಾತ್ಮ ವರ್ಧಮಾನ ।
ಮಹಾವೀರನು ॥
ಪೆರ್ಮೆವಡೆದ ಚಾಗಿ ಯೋಗಿ ।
ಮಹಾವೀರನು ॥ ೧೪ ॥

*

### ಸಾಂಗತ್ಯ

ಭಾರತವರ್ಷದ ಜೀವದಯೆಯ ದಿನ ।
ಸಾರಲಭಯವನು ಜಗಕೆ ॥
ಭೂರಿ ದಯಾಳುವು ಸಿರಿ ಕೃಷ್ಣರಾಯನು ।
ತಾರೆ ಭಾನುಗಳಂತೆ ಬೆಳಗೆ ॥ ೧೫ ॥

ನರಸಿಂಹ ಕಂಠೀರವ ಯುವರಾಜನು ।
ಮೆರೆಯಲಿ ವೈಭವ ಸುಖದಿ ॥
ವರ ರತ್ನ ಜಯಚಾಮರಾಜ ಕುಮಾರನು ।
ಚಿರಕಾಲ ಬಾಳಲಿ ಸೊಗದಿಂ ॥ ೧೬ ॥

ದಯೆಯನು ಬೀರುವ ಜಿನಧರ್ಮ ಮೆರೆಯಲಿ ।
ದಯಾಸಿಧಿ ಮಹಾವೀರ ಕೃಪೆಯಿಂ ॥
ದಯೆಯಿಂದ ಜೀವರಾಶಿಗಳ ಕಾಪಾಡುವ ।
ನಯವಿದು ಹಬ್ಬಲಿ ಜಗದಿ ॥ ೧೭ ॥

ಭಕ್ತಿ ಕುಸುಮಾಂಜಲಿ



ಸ್ವಸ್ತಿಶ್ರೀ ಪೂಜ್ಯ ಜಯಕೀರ್ತಿ ನಿರ್ಗ್ರಂಥ ಮುನಿಮಹಾರಾಜರು

ಕೌಪೀನ ಸಂಸಾರದಳಲನು ನೋಡುತ
ಪಾಪ ವಿಚ್ಛೇದನ ಗುರಿಗೆ ॥
ಆಪತ್ತಿದೆನ್ನುತ ನಿರ್ವಾಣ ದೀಕ್ಷೆಯ ।
ತಾ ಪಡೆಯುತ ಸಂಚರಿಸಿ ॥ ೧೦ ॥

ನಿರ್ವಾಣ ದೀಕ್ಷೆಯು ನಿರ್ನಾಮ ಮಾಳ್ಪುದು
ಸರ್ವ ಕರ್ಮಂಗಳನೆಂದು ॥
ಉರ್ವಿಗೆ ಸಾರುತಲಾತ ತತ್ತ್ವಾರ್ಥವ ।
ಪರ್ವಿದ ಜನವನು ತಾಳಿ ॥ ೧೧ ॥

ಭಾಮಿನಿ ಷಟ್ಪದಿ

ಜೀವನದ ಗುರಿ ಯಾವುದೆಂಬುದ
ಭಾವಿಸುತ ಜೈನಾಗಮಂಗಳ ।
ಕೋವಿದನು ತಾನೆನಿಸಿ ತತ್ತ್ವಾರ್ಥ ಪಥಯ
ನುಧಿಸುತಲಿ ॥
ಪಾವನದ ಸೊಬಗಿನಾ ಸುಧೆಯನು ।
ಭೂವಿನುತದಾನಂತ ಧರ್ಮದ
ನೋವನಾರಿಪ ಪರಮ ಮಂತ್ರವ ನೀಳ್ವ ಭವ್ಯರಿಗೆ ॥

ಕಿರಿಯತನದಲಿ ಪರಮ ಧರ್ಮದ
ನುರುತರದ ಭಕುತಿಯೊಳು ಭಾವಿಸಿ ।
ಸುರಸವೃಂದಾರ್ಚಿತನ ಜಿನಪನ ನೆನೆದು ಮನದೊಳಗೆ ॥
ಪರಮ ಕರುಣಾಸಿಂಧು ಯೋಗಿಯು ।
ಕರೆಯುತಿರುವನು ಧರ್ಮವರ್ಷವ ।
ಪರಿಪರಿಯಲುಪದೇಶಿಸುತ್ತ ಸನಾತನಧರ್ಮವನು ॥

ಕೌಪೀನ ಸಂಸಾರದಳಲನು ನೋಡುತ
ಪಾಪ ವಿಚ್ಛೇದನ ಗುರಿಗೆ ॥
ಆಪತ್ತಿದೆನ್ನುತ ನಿರ್ವಾಣದೀಕ್ಷೆಯ ।
ತಾ ಪಡೆಯುತ ಸಂಚರಿಸಿ ॥ ೧೦ ॥

ನಿರ್ವಾಣ ದೀಕ್ಷೆಯು ನಿರ್ನಾಶವು ಮಾಳ್ಪುದು
ಸರ್ವ ಕರ್ಮಂಗಳನೆಂದು ॥
ಉರ್ವಿಗೆ ಸಾರುತಲಾತ ತತ್ತ್ವಾರ್ಥವ ।
ಪರ್ವಿದ ಜನವನು ತಾಳಿ ॥ ೧೧ ॥

ಭಾಮಿನಿ ಷಟ್ಪದಿ

ಜೀವನದ ಗುರಿ ಯಾವುದೆಂಬುದ
ಭಾವಿಸುತ ಜೈನಾಗಮಂಗಳ ।
ಕೋವಿದನು ತಾನೆನಿಸಿ ತತ್ತ್ವಪಥವ
ಮಥಿಸುತಲಿ ॥
ಪಾವನದ ಸೊಬಗಿನಾ ಸುಧೆಯನು ।
ಭೂವಿನುತದಾರ್ಹಂತ ಧರ್ಮವ
ನೋವನಾರಿಪ ಪರಮ ಮಂತ್ರವ ಪೇಳೆ ಭವ್ಯಂಗೆ ॥

ಕಿರಿಯತನದಲಿ ಪರಮ ಧರ್ಮವ
ನುರುತರದ ಭಕುತಿಯೊಳು ಭಾವಿಸಿ ।
ಸುರಪವೃಂದಾರ್ಚಿತನ ಜಿನಪನ ನೆನೆದು ಮನದೊಳಗೆ ॥
ಪರಮ ಕರುಣಾಸಿಂಧು ಯೋಗಿಯು ।
ಕರೆಯುತಿರುವನು ಧರ್ಮವರ್ಧನ ।
ಪರಿಪರಿಯಲುಪದೇಶಿಸುತ್ತ ನಿಜಾತ್ಮಧರ್ಮವನು ॥

### ಸಾಂಗತ್ಯ

ಮಿಗೆ ಭಾದ್ರಪದ ಮಾಸ ಕೃಷ್ಣದಷ್ಟಮಿಯೊಳು ।
ಸೊಗಯಿಪ ಶುಕ್ರವಾರದೊಳು ॥
ಅಗಣಿತ ಗುಣಸಿಧಿ ಯೋಗೀಂದ್ರ ವರ್ಯನು ।
ಜಗದೊಳಗುದ್ಭವಿಸಿದನು ॥ ೫ ॥

ಮಾನುರಾಜೇಂದ್ರನ ಗೋತ್ರೋದ್ಭವನಿವ ।
ಜ್ಞಾನಿ ಬ್ರಹ್ಮೇಂದ್ರನ ಪ್ರವರ ॥
ಸೂನುವು ಮೆರೆವನು ದರ್ಭಸೂತ್ರೋದ್ಭವ ।
ಮಾನಿತ ಪೂರ್ವ ಶಾಖೆಯೊಳು ॥ ೬ ॥

ವರುಷ ಮೂವತ್ತೊಂದು ನೆರೆಯಲು ಸ್ವಾಮಿಯು ।
ಪರಮ ವೈರಾಗ್ಯವ ಧರಿಸಿ ॥
ವರ ಮುನಿ ಶಾಂತೀಶ ಯೋಗೀಂದ್ರ ಪದದೊಳು ।
ಧರಿಸುತ ಜನದೀಕ್ಷೆಯನು ॥ ೭ ॥

ಪ್ರತಿಮಾದಿ ವ್ರತಗಳ ಬ್ರಹ್ಮಚರ್ಯಂಗಳ ।
ನತಿಶಯದಿಂವಲಿ ಧರಿಸಿ ॥
ಸತತವು ಕರ್ಮದೋಹಂಗಳನಟ್ಟುತ ।
ಹಿತವನು ಕೋರುತ ಭುವಿಗೆ ॥ ೮ ॥

ಐಲಕ ಪದವಿಯ ಶೀಲವ ತಾಳುತ ।
ಕಾಲನ ಗೆಲ್ಲುವ ಪರಿಯ ॥
ಭೂಲೋಕ ಜನತೆಗೆ ಸಾರುತ ನಡೆದನು ।
ಪಾಲಿಸಿ ತಪದುಚ್ಚೈಗಳನು ॥ ೯ ॥

ಅರಿವನಾಚರಿಸುವುದು ಕಷ್ಟವು ।
ತೊರೆವುದಿಹವನು ಪರಮ ಕಷ್ಟವು ।
ತೊರೆದುಬಿಟ್ಟರು ಮರೆಯಲೊಲ್ಲದು ಮಂಗ
ಮಾನಸವು ॥
ಪರಮ ಗುರು ಜಯಕೀರ್ತಿ ಯೋಗಿಯು ।
ಅರಿವನೊರೆದಾಚರಿಸುತಿರುತಿಹ ।
ತೊರೆದು ಬಿಟ್ಟಿಹ ಬಂಧನದ ವ್ಯಾಮೋಹಭಾವಗಳ ॥

ಖಂಡ ಭೋಗ ಷಟ್ಪದಿ

ಜೈನ ತತ್ತ್ವಾರ್ಥ ಚಂದ್ರ ।
ಮಾನ ನಿಧಿಯು ಧರ್ಮ ಋಷಿಯು ।
ಸಾನುರಾಗದಿಂದ ಜನಕೆ ।
ಶಾಂತಿಯೀವನೆ ॥
ಭಾನುಕಿರಣದಂತೆ ಭುವಿಗೆ ।
ಬೆಳಕ ತೋರ್ಪನೆ ॥ ೧೫ ॥

ಇಹದ ಸುಖಕೆ ಸೋಸಿ ಮನದಿ ।
ದಹಿಸಿ ಮೋಹ ಮಮತೆಗಳನು ।
ಸಹಿಸಿ ಕಾಯ ಕಷ್ಟಗಳನು ।
ಪ್ರೋಳೆವ ಪರಮನೆ ॥
ಅಹಿತ ವಿಷಯ ತೊರೆವ ಧೀರ ।
ಯೋಗಿ ಪರಮನೆ ॥ ೧೬ ॥

ಆತ್ಮ ಸೊಬಗನರಿವದಾಗೆ ।
ದೇಹ ಮಮತೆ ಪಾರಿಪೋಗೆ ।
ಅಶನವಿಳಿದು ವಸನವಳಿಯ ।

ಲಾತ್ಮವಿಕಸಿತು ॥
ಮಸುಳದಂತ ಸೊಗವ ಪಡೆದು ।
ಲಾತ್ಮವೆಳಸಿತು ॥ ೧೭ ॥

ನಗ್ನ ಮುನಿಯ ಸಂಘವಿಹುದು
ಭಗ್ನ ಮಾಡೆ ಕರ್ಮಗಳನು ।
ಅಗ್ನಿಯಂತೆ ದಹಿಸುತಿಹುದು ।
ಮೋಹ ಪಾಶವ ॥
ವಿಘ್ನಗಳನು ಬಿಡಿಸುತಿಹುದು ।
ಮೋಕ್ಷ ತಾಣಕೆ ॥ ೧೮ ॥

ಜಯದ ಕೀರ್ತಿ ವಿಮಲ ಕೀರ್ತಿ ।
ಪರಮ ಶಾಂತಿ ಭಾವ ಮೂರ್ತಿ ।
ನಿರುತ ಭವ್ಯ ಜನರ ಕ್ಷಾಂತಿ ।
ಯೋಗಿ ಪರಮನೆ ॥
ಅರುಹ ಜಾನವಮಲಮೂರ್ತಿ ।
ಚಾಗಿ ಪರಮನೆ ॥ ೧೯ ॥

ವಿಮಲವರಿವ ತೋರು ಗುರುವೆ ।
ಮಮತೆ ಮೋಹಗಳನು ತೊರೆಸು ।
ಸುಮನಸಾಧಿರಾಜ ಗುರುವ ।
ನೆಮಗೆ ತೋರಿಸು ॥
ದಮನಿಸುತ್ತ ಪಾಪವಳಿ
ಗೆಲವ ಕರುಣಿಸು ॥ ೨೦ ॥

*



ಕಂದ

ವಾಹನಮಂ ತ್ಯಜಿಸುತ್ತಂ ।
ಆಹಾರಮ ತಪಸಿಗಾಗಿ ಸೇವಿಪ ಪರಮಂ ॥
ಸಾಹಸ ಯೋಗೀಶ್ವರನುಂ ।
ಮೋಹವ ಪರಿದಟ್ಟಿಸಿಂದ ಜಯಕೀರ್ತಿ ಗುರು ॥ ೨೧ ॥

ದೇಹದನಿತ್ಯತೆ ಬಗೆವುತ ।
ದಾಹಿಸುತಂ ನಿತ್ಯಸುಖವನಿಹಮುಂ ಮರೆದುಂ ॥
ಮೋಹಿಪ ಪೊನ್ನಂ ಮಣ್ಣಂ ।
ಸಾಹಸದಿಂ ತೊರೆದನಕ್ಕೆ ಜಯಕೀರ್ತಿ ಗುರು ॥ ೨೨ ॥

ಭಾಮಿನಿ ಷಟ್ಪದಿ

ಮಂಗಳವು ಜಯಕೀರ್ತಿ ಯೋಗಿಗೆ ।
ಮಂಗಳವು ಯತಿವರ್ಯ ಸಂಘಕೆ ।
ಮಂಗಳವು ಆರ್ಹಂತ್ಯ ಧರ್ಮಕೆ ತತ್ತ್ವದಾಗರಕೆ ॥
ಮಂಗಳವು ಸಿರಿ ಕೃಷ್ಣಭೂಪಗೆ ।
ಮಂಗಳವು ಕನ್ನಡದ ನಾಡಿಗೆ ।
ಮಂಗಳವು ಜನಪದಗಳೆಲ್ಲಕೆ ಜೀವಮಂಡಲಿಗೆ ॥ ೨೩ ॥

ಕಂದ

ಧರಣಿಪ ನಾಲ್ಮಡಿ ಕೃಷ್ಣಂ ।
ಧರಣಿಯ ಸದ್ಧರ್ಮದಿಂದೆ ಪೊರೆಯುತ್ತಿರ್ಪಂ ॥
ಗುರು ಜಯಕೀರ್ತಿಯ ಗುಣಮಂ ।
ಧರಣೇಂದ್ರಂ ಬರೆದು ಪಾಡಿ ಧನ್ಯತೆ ಪಡೆದಂ ॥ ೨೪ ॥

ಭಕ್ತಿ ಕುಸುಮಾಂಜಲಿ



ಸ್ವಸ್ತಿಶ್ರೀ ಪೂಜ್ಯ ದ[illegible]ಸಾಗರ ನಿರ್ಗ್ರಂಥ ಮುನಿಮಹಾರಾಜರು

# ಸ್ವಸ್ತಿಶ್ರೀ ದೇಶಭೂಷಣ ನಿರ್ಗ್ರಂಥ ಮುನಿಮಹಾರಾಜರ ಸ್ತವನ*

ಕಂದ

ಪದಿನಾಲ್ಕು ಮಂದಿ ಮನುಗಳ್ ।
ಪುದಿದಿರ್ದಾ ತಮಮನೆಲ್ಲ ಪರಿಹರಿಸುತ್ತುಂ ॥
ವಿಧವಿಧ ಭಯಮುಂ ದೂಡುತ ।
ಮುದದಿಂದಂ ಪೊರೆದರಲ್ತೆ ಜಗಮುಂ ಮುನ್ನಂ ॥ ೧ ॥

ನಾಭಿಯ ಸೂನುಂ ವೃಷಭಂ ।
ಈ ಭೂಮಿಗನರ್ಘ್ಯಮಾದ ಸೊಗಮುಂ ಕೊಡುತಂ ॥
ಆ ಭವ್ಯೋನ್ನತಿ ಸಂಸಂ ।
ಶೋಭಿಸಿದಂ ಜಗದ ತಾತನೆನಿಸಾ ಪೆಸರಿಂ ॥ ೨ ॥

ಸಾಂಗತ್ಯ

ದೇಶಭೂಷಣರೆಂಬ ಸಾಸಿಗ ಯೋಗಿಯ ।
ಲೇಸಾದ ಚರಿತೆಯ ಪೇಳ ॥
ಈಸು ಭವಂಗಳ ಕರ್ಮವ ನೀಗಲು ।
ಆಶಿಸಿ ಭಕ್ತಿಯಿಂದೊರೆವೆಂ ॥ ೩ ॥

ಚೆಂದಿರನಲ್ಲಿ ಕಪ್ಪಿದ್ದರು ತಿಂಗಳು ।
ಕುಂದದೆ ನಿರ್ಮಲವಿಹುದು ॥
ಸಂಧಿಸಿ ಶಬ್ದದೋಷಗಳೊಮ್ಮೆ ಬಂದರು ।
ಚೆಂದದ ಧರ್ಮ ಮಾಸುವುದೆ ॥ ೪ ॥

---

* ಶ್ರೀ ದೇಶಭೂಷಣ ನಿರ್ಗ್ರಂಥ ಮಹಾರಾಜರುಗಳ ಸವಾರಿಯು ಬೆಂಗಳೂರಿಗೆ ದಯಮಾಡಿಸಿದ್ದ ಸಮಯದಲ್ಲಿ ಗುರುಸನ್ನಿಧಿಯಲ್ಲಿ ಹಾಡಿದ ಪದ್ಯಗಳು. (೨೨—೧—೧೯೩೮)

ಶುಕ್ರವಾರದ ದಿನ ಭಕ್ತಿಯಿಂದರ್ಚಿಸಿ ।
ವಿಕ್ರಮ ಯೋಗೀಶ್ವರನ ॥
ಶಕ್ರವೃಂದಾರ್ಚಿತ ಜಿನರಡಿ ಭಕ್ತನ ।
ಈ ಕೃತಿ ಪೇಳ್ದಿನು ಕೇಳಿ ॥ ೫ ॥

ಕಂದ

ಬೆಳಗಾಮು ಜಿಲ್ಲೆಯದರೊಳ್ ।
ಪ್ರೊಳೆಯುತ್ತಿಹ ಚಿಕ್ಕೋಡು ತಾಲೋಕಿನೊಳಂ ॥
ಕಳೆಯುನ್ನತಿ ಕೋಥಳಿಪುರ ।
ಮಿಳಿಗಾದರ ಚೆಲ್ವಿನಿಂದೆ ಮೆರೆಯುತ್ತಿರ್ಕುಂ ॥ ೧ ॥

ಸಾಂಗತ್ಯ

ಕೋಥಳಿಯಧಿಪತಿ ಸತ್ತಿಗೌಡೇಶಗೆ ।
ಖ್ಯಾತಿಯುಕ್ಕಾಂಬೆಯು ಮಡದಿ ॥
ಭೂತಳ ವಿಖ್ಯಾತರೀರ್ವರ ಗರ್ಭದಿ ।
ಪೂತನು ಜನ್ಮವ ಪಡೆದಂ ॥ ೧ ॥

ಮುಗುವಿಗೆ ಬಾಳಗೌಡೆಂಬುವ ಪೆಸರನು ।
ಮಿಗಿಲಿನುತ್ಸಾಹದಲಿಟ್ಟು ॥
ಸೊಗದಿಂದಲಿದ್ದರು ಮಾತಾಪಿತೃಗಳು ।
ಜಗದ ಮಾಣಿಕ್ಯನ ನೋಡಿ ॥ ೨ ॥

ಏಳು ವರ್ಷಂಗಳು ಲೀಲೆಯಿಂ ಸಾಗಲು ।
ಕಾಲದಾಯುಷ್ಯವು ತುಂಬಿ ॥
ಲೋಲಸತ್ಯಾಖ್ಯನು ಶೀಲೆಯಕ್ಕಾಂಬೆಯು ।
ಭೂಲೋಕ ವರ್ಜಿತರಾದರ್ ॥ ೩ ॥

## ಭಾಮಿನಿ ಷಟ್ಪದಿ

ಎಳೆಯತನದಲಿ ತಂದೆತಾಯಿಯ ।
ಕಳೆದುಕೊಳ್ಳುತ ಕಿರಿಯ ತಂದೆಯ ।
ಒಲುಮೆಯೊಳು ಮುತ್ತಜ್ಜ ಪದ್ಮಾವತಿಯ ಪಾಲನೆಯಿಂ ॥
ಬೆಳೆದು ವಿದ್ಯೆಯ ಗಳಿಸಿ ಕೃಷಿಯನು
ಫಲಿಲನೆಸಗುತೆ ನಡೆಸುತಿದ್ದನು ।
ಇಳೆಯ ವ್ಯವಹಾರವನು ಬಾಳಸ ಗೌಡ ಯೋಗೀಂದ್ರ ॥ ೧೦ ॥

ವರುಷವಿಪ್ಪತ್ತಾರು ತುಂಬಲು ।
ಕಿರಿಯ ತಂದೆಯುಮಜ್ಜಿ ಪದ್ಮೆಯು ।
ವಿರಚಿಸಲು ವೈವಾಹ ಕಾರ್ಯವ ವಧುವ ಪರಸುತಿರೆ ॥
ಪರಮ ಬಾಳೇಶ್ವರನ ಮನದೊಳ್ ।
ಗುರುತರದ ವೈರಾಗ್ಯ ಮೊಳೆಯಿತು
ಕರೆದು ಸೂಚಿತು ಭವ್ಯಜನತೆಗೆ ತತ್ತ್ವದಮೃತವನು ॥ ೧೧ ॥

### ಕಂದ

ತಪಮಂ ಮನದೊಳ್ ಬಗೆದುಂ ।
ಉಪಸರ್ಗಂ ಮಾಳ್ಪರಿವರು ಬಂಧುಗಳೆನುತುಂ ।
ಅಪವರ್ಗಯಾತ್ರೆಗಾಟಿಸಿ ।
ಸುಪವಿತ್ರಂ ಪೋದನಲ್ತೆ ಸಮ್ಮೇದಕ್ಕಂ ॥ ೧೨ ॥

ತಂದೆಯು ತಾಯಿಯು ಪೋದಾ ।
ವಂದುಗಮಂ ಮನದೊಳಿಟ್ಟು ನಿತ್ಯಮು ನೆನೆದು
ಬಂಧುಗಳೆಲ್ಲರ ತೊರೆಯುತೆ ।
ಬಂಧನಮಂ ಕಿಳ್ತನಲ್ತೆ ಗುರುಪಾದಾಯಂ ॥ ೧೩ ॥

ಜಯಕೀರ್ತಿ ಮಹಾಮುನಿಯಂ ।
ಭಯಮೆಲ್ಲವ ದೂಡಿ ಕಳೆವ ಜಯದುಂದುಭಿಯಂ ॥
ನಯನಾನಂದದ ಪೆರ್ಚಿಂ ।
ಲಯಮಾಡಲ್ಕಾರ್ಮಗಳನು ಕಂಡಂ ಯುವಕಂ ॥ ೧೪

ಸಾಂಗತ್ಯ

ಕರ್ಮಸಂದೋಹವ ನಿರ್ಮೂಲ ಮಾಡಲು ।
ನಿರ್ಮಮಕಾರನಾಗುತಲಿ ॥
ಪೆರ್ಮೆಯ ಪಡೆದಿಹ ಜಯಕೀರ್ತಿ ಮುನಿಗಳ ।
ಕೂರ್ಮೆಯ ಪೊಂದುತ ಮುದದಿಂ ॥ ೧೫ ॥

ಸಮ್ಮೇದಗಿರಿಯೊಳಗುಮ್ಮೇಳಿಸಲು ।
ಸಮ್ಮದಮಾನಸನಾಗಿ ॥
ಮುಮ್ಮಡಿ ವಂದಿಸಿ ಶ್ರೀಕ್ಷೇತ್ರಗಿರಿಯನು ।
ಸಮ್ಮೋದ ತಪವ ಸ್ವೀಕರಿಸಿ ॥ ೧೬ ॥

ಆರನೆ ನೆಲೆಯನು ಸಾರಾತ್ಮ ಪಿಡಿಯುತ ।
ಸಾರುತಲಾತ್ಮ ತತ್ತ್ವವನು ॥
ಕೋರುವ ಶಾಂತಿಯ ಲೋಕದ ಜನತೆಗೆ ।
ಕಾರುಣ್ಯ ಸೊದೆಯನು ಬೀರಿ ॥ ೧೭ ॥

ರಾಯ ಮಹಾದುರ್ಗ ಪುರವನು ಸಾರುತೆ ।
ಕಾಯಕ್ಲೇಶಂಗಳ ದಹಿಸಿ ॥
ಮಾಯಾಮೋಹದ ಬಲೆಯನುತ್ತರಿಸಲು ।
ಪಾಯವ ಚಿಂತನಗೈದು ॥ ೧೮ ॥

ದೇಶಭೂಷಣಸಿವನು ಯೋಗಿಯು
ಪೇಸಿದನು ಪೂರ್ಣ ಪಣ್ಣಿಗೆ ।
ಆಶಿಸಿಹ ವರ ಮೋಕ್ಷಲಕ್ಷ್ಮಿಯ ಕರದ ಕಾಣಿಕೆಗೆ ॥
ಗಾಸಿಪನು ಕೆಡುತಿರ್ಪ ಮೆಯ್ಯನು ।
ಪೋಷಿಪನು ಪರಮಾತ್ಮ ಗುಣವನು ।
ಸಾಸಿಗನು ಧರ್ಮೈಕ ಪಾರಾಯಣನು ಯೋಗೀಂದ್ರ

ಕೆಡುವ ಮೆಯ್ಯನು ಕೊಟ್ಟು ತಾನುಂ ।
ಕೆಡದ ಮೋಕ್ಷವ ಕೊಂಬನೀತಂ ।
ಕಡು ವಿವೇಕಿಯು ಜಾಣನಲ್ಲವೆ ದೇಶಭೂಷಣನು
ಒಡಲ ಪೊರೆಯುವ ಕಜ್ಜದೊಳು ನಾವ್ ।
ಕಡುಗಲಿಗಳಾಗಿರುವವಲ್ಲದೆ ।
ಸಡಿಲಿಸಲು ಬಗೆಪೋರೆವಕಟಾ ಕರ್ಮಬಂಧಗಳಂ ॥

ಖಂಡ ಭೋಗ ಷಟ್ಪದಿ

ಭೂಪಿಯ ಸಿರಿಯ ತೊರೆದು ಮೂಡಿ
ಸವಿಯ ನೋಡಮೂಟವಮಾಡಿ
ಭುವನಕೆಲ್ಲ ಅರಿವ ಪರಿಪ
ಮುಡಿಮುನಾವನು ।
ಪವನವೇಗ ಕರ್ಮಹಾರಿ ।
ಮುನಿಪನಾವನು ೩೫ ॥

ಗೌತಪದವಪಿಗಿಚ್ಛೆ ಪಡದ ।
ನಾಥ ಪೆಣ್ಣ ಬಗೆಗೆ ತರದ ।
ಮೌಷ್ಟ್ಯದಿಹಕೆ ಮನವ ಕೊಡದ ।

ಪೂಜ್ಯನಾವನು ।
ಜಾಡ್ಯ ಕರ್ಮದಹನ ಗೈವ ।
ವೀರನಾವನು ೨೬ ।

ಕುಲದ ಮದಕೆ ಪದವಿ ಮದಕೆ ।
ನಿಲುಕುತಿಪ್ಪ ಪ್ರಾಯ ಮದಕೆ
ಸಿಲುಕದಾತ್ಮ ನೆಲೆಯ ಕಂಡ ।
ಯೋಗಿ ಯಾವನು ॥
ಮಲಿನ ಕರ್ಮದಳಲ ಗೆಲ್ಲ ।
ಚಾಗಿ ಯಾವನು ॥ ೨೭ ॥

ಅಂಗ ಸುಖಕೆ ಭಂಗ ಪಡದೆ ।
ಮಂಗಳಾತ್ಮ ಜಿನನ ಪಿಡವೆ ।
ಹಿಂಗಿಸುತ್ತ ಪಾಪದಳಲ ।
ಹೊಳೆವನಾವನು ॥
ತುಂಗ ಜ್ಞಾನದಮಲ ಮೂರ್ತಿ ।
ಪರಮನಾವನು ॥ ೨೮ ॥

ದೇಶಭೂಷಣಾರ್ಯ ಯೋಗಿ ।
ಲೇಸನೀವ ಪರಮ ಚಾಗಿ ।
ಭೂಷಣಕ್ಕೆ ಭೂಷಣವನು ।
ದೇಶಭೂಷಣ ॥
ಆಸೆ ಮೋಹ ಮಾಯೆಯೊಂಬ ।
ತ್ರಿಪುರ ಶೋಷಣ ॥ ೨೯ ॥

ಗುರುವೆ ಬೆಳಕಿನುದಯು ತೋರು ।
ಹರಿಸು ಮಾಯೆ ಗಾಢ ನಿಶೆಯು ।
ಅರಿವಿನಿಂದ ಜಿನರ ನೋಳ್ಪ ।
ವರವ ಕರುಣಿಸು ।
ಮರುಕದಿಂದ ಜಗವ ನೋಳ್ಪ ।
ಮನವ ಕರುಣಿಸು ॥ ೨೦

## ಭಾಮಿನಿ ಷಟ್ಪದಿ

ಮಂಗಳವು ಚವ್ವೀಸ ಜಿನರಿಗೆ ।
ಮಂಗಳವು ಜಿನಶಾಸನಂಗಳಿ ।
ಗಂಗರಕ್ಷಕರೆನಿಪ ಯಕ್ಷಕರು ಯಕ್ಷಿಯರುಗಳಿಗೆ ॥
ಮಂಗಳವದಾರ್ಹಂತ್ಯ ಧರ್ಮಕೆ ।
ಮಂಗಳವು ನಿರ್ಗ್ರಂಥ ಯೋಗಿಗೆ ।
ಮಂಗಳವು ಶ್ರೀ ದೇಶಭೂಷಣ ಪೂಜ್ಯಗುರುಗಳಿಗೆ ॥

## ಕಂದ

ಶ್ರೀ ಜಯಯೋಗೀಶ್ವರನಂ ।
ಪೂಜಿಸಿ ಕೃತಕೃತ್ಯರಾಗಿ ಪುಣ್ಯವ ಗಳಿಸಿ ॥
ಸಾಜದ ಭಕ್ತಿಯ ಭರದಿಂ ।
ಮೋಜೆಯು ಮಿಗೆ ಪರಮಭಕುತ ಭವ್ಯರು ಮೆರೆವರ್ ॥

## ಸಾಂಗತ್ಯ

ಗುರು ಜಯಕೀರ್ತಿ ಮುನೀಂದ್ರರ ಸಂಘವ ।
ಪರಮ ಭಕ್ತಿಯೊಳು ಸೇವಿಸುತ ॥
ನಿರುತವು ಪುಣ್ಯ ಪ್ರಖ್ಯಾತಿಯ ತಳೆವರು ।
ಗುರು ಸೇವೆಯಿಂದಲಿ ಭಕ್ತರ್ ॥ ೨೨ ॥

ವೇಶಭೂಷಣರನು ತೋಷದಿಯರ್ಚಿಸಿ ।
ಲೇಸನು ಪೊಂದಿದರಿವರು ॥
ಸಾಸಿರನಾಮನು ಶ್ರೀಶ ಲೋಕೇಶನು ।
ಪ್ರೋಷಿಸೆ ನಿರುತದೋರ್ವರಂ ॥ ೩೪ ॥

ಕಂದ

ವರ್ಧಿಕೆ ಯಾದವ ವಂಶಂ
ವರ್ಧಿಕೆ ಶ್ರೀ ಕೃಷ್ಣರಾಜ ನರಪತಿ ತಿಲಕಂ
ವರ್ಧಿಕೆ ಜೈನ ಜನಾಂಗಂ ।
ವರ್ಧಿಸಲೀ ಜಗದ ಶಾಂತಿ ದೇವನ ದಯೆಯಿಂ ॥ ೩೫ ॥

ಧರಣಿಪ ನಾಲ್ವಡಿ ಕೃಷ್ಣಂ
ಧರಣಿಯ ಸದ್ಧರ್ಮದಿಂದೆ ಪೊರೆಯುತ್ತಿರ್ಪಂ ॥
ಗುರು ನಿರ್ಗ್ರಂಥರ ಗುಣಮಂ ।
ಧರಣೀಂದ್ರಂ ಬರೆದು ಪಾಡಿ ಧನ್ಯತೆ ಪಡೆದಂ ॥ ೩೬ ॥

ಸ್ವಸ್ತಿ ಶ್ರೀ

# ಚಾರುಕೀರ್ತಿ ಪಂಡಿತಾಚಾರ್ಯವರ್ಯ ಮಹಾಸ್ವಾಮಿಗಳವರ ಗುಣಗಾನ*

ಭಾಮಿನಿ ಷಟ್ಪದಿ

ನೇಮಿಚಂದ್ರಾಚಾರ್ಯವರ್ಯನು ।
ಕಾಮಧೇನುವ ಪೋಲುತಿರ್ದನು ।
ಆ ಮಹಾಮುನಿವರ್ಯನೂರ್ಜಿತ ಪೀಠವೇರುತಲಿ ॥
ಭೂಮಿಯೊಳು ಮಂಡಿತರು ಗುರುಗಳು ।
ಸೋಮಕಳೆಯಾ ಚಾರುಕೀರ್ತಿಗಳ್ ।
ನೇಮದೊಳು ರಂಜನೆಯನಿತ್ತರು ಧರ್ಮವೇಳಿಗೆಗೆ ।೧।

ನೇಮಿಚಂದ್ರನ ಪೆಸರ ಪೊಂದುತ ।
ನೇಮಿಸಾಗರ ವರ್ಣಿ ಬಂದರು ।
ಭೂಮಿಪಾಲನ ಕೃಷ್ಣರಾಯನ ಜಸವ ಪೆರ್ಚಿಸಲು ॥
ಈ ಮಹಾಬೆಳ್ಗೊಳದ ಪೀಠದಿ ।
ಕಾಮಿಸಿದ ವರವೀವ ಬಿಜ್ಜೆಗೆ ।
ಧಾಮವಾಗಿಹ ಜೈನ ಸಂಸ್ಕೃತ ವೇದಶಾಲೆಯನು ॥ ೨ ॥

ಸಾನುರಾಗದಿ ರಚಿಸಿ ಪೋಷಿಸಿ ।
ಭಾನುವಿನೊಲರಿವನ್ನು ಪರಿಸುತ ।
ಸೂನುಗಳ ಮಾಳ್ಕೆಯೊಳು ಪೊರೆಯುತ್ತಿಹನು ಭಕ್ತರನು ॥
ಮಾನ ಮೂರುತಿಯಿವನ ಪಟ್ಟದಿ ।
ಜೈನ ಜನತೆಯ ಪುಣ್ಯದುದಯವು ।
ಊಣೆಗಳನೋಡಿಸಿತು ಶಾಂತಿಯ ಬೀರುತೆಲ್ಲೆಡೆಯೋಳ್ ॥

---

* ಯಾತ್ರಿಕರ ಸಮ್ಮೇಳನವು ಬೆಂಗಳೂರು ನಗರದಲ್ಲಿ ಸೇರಿದ್ದಾಗ ಶ್ರೀಗಳವರ ಸನ್ನಿಧಿಯಲ್ಲಿ ಹಾಡಿದ ಪದ್ಯಗಳಿವು.



ಸ್ವಸ್ತಿಶ್ರೀ ಪೂಜ್ಯ ಚಾರುಕೀರ್ತಿ ಪಂಡಿತಾಚಾರ್ಯವರ್ಯ
ಮಹಾಸ್ವಾಮಿಗಳವರು, ಶ್ರವಣಬೆಳ್ಗೊಳ

ಪರರ ದುಃಖಕೆ ನೋವನೀತನು ।
ಪರರ ಸಂತಸಗಳಿಗೆ ನಲಿವನು ।
ಪರರಿಗುಪಕೃತಿಮಾಳ್ಪ ಕಷ್ಟದಿ ಬರುವ ಮುಂದಾಗಿ ॥
ಅರಿಯನಿವ ರಿಪು ಮಿತ್ರ ಭೇದವ ।
ಮೆರೆಯನಿವನಾಚಾರ್ಯನೆನುತಲಿ ।
ಸಿರಿಯ ಹೆಚ್ಚಿಸೆ ಹಿಂಸಿಸನು ಶಿಷ್ಯರನು ಕಾಣಿಕೆಗೆ ॥ ೪ ॥

ಈತನಾಡುವ ಮಾತು ಧರ್ಮವು ।
ಈತನೋದುವ ಕಾವ್ಯ ತತ್ತ್ವವು ।
ಈತ ಪೋದೆಡೆಗಳಲಿ ಧರ್ಮದ ಪೊನಲು ಪ್ರವಹಿಪುದು ॥
ಈತ ಧರ್ಮದ ಮೂರ್ತಿಯಾಗಿಹ ।
ನೀತ ಪಾವನ ಚರಿತನಾಗಿಹ ।
ಪೂತ ಪಂಡಿತ ಚಾರುಕೀರುತಿ ಗುರುಮಹಾರಾಯ ॥ ೫ ॥

ಬಾಲ್ಯದೊಳು ದೀಕ್ಷೆಯನು ಧರಿಸುತ ।
ಲೆಲ್ಲ ಕಾಲದೊಳಾಗಮಂಗಳ ।
ನುಲ್ಲಸದಲಭ್ಯಾಸಿಸುತ ನಾಡಿನೊಳೆಲ್ಲ ಸಂಚರಿಸಿ ॥
ಬಲ್ಲಿದನು ಸಂಸಾರ ದೂರನು ।
ಚೆಲ್ಲಿದನು ತಿಳುವಿನಾ ಬಿತ್ತವ ।
ಮಲ್ಲನೀತನು ಕರ್ಮರಾಜ್ಯವ ಸುಡಲು ಹವಣಿಸಿಹ ॥ ೬ ॥

ಈತನಿಹ ಪೀಠವದು ಪಾವನ ।
ಈತನಿಹ ತಾಣದಲಿ ಶಾಂತಿಯು ।
ಈತ ನೆಲಸಿಹ ಸಿರಿ ಮಠವು ವರವಿದ್ಯೆಗಾಗರವು ॥

ಈತ ಕ್ಷಮಿಪನು ಧೂರ್ತ ಜನತೆಯು ।
ಈತ ಪರಸುವ ಶತ್ರುಗಣವನು ।
ಈತ ಪೊಳೆವನಜಾತಶತ್ರುವು ಚಾರುಕೀರ್ತಿಯಲಾ ॥ ೭ ॥

ಜೈನ ಜನತೆಯ ಪುಣ್ಯಮೂರ್ತಿಯು ।
ಜೈನ ನಾಗರಿಕತೆಯ ತಳಹದಿ ।
ಜೈನ ಧರ್ಮದ ಕಡಲ ಪೆರ್ಚಿಪ ಸೋಮತೇಜಸಿವ ॥
ಜೈನ ಸಂಸ್ಥೆಗಳೆಲ್ಲಕಾತ್ಮನು ।
ಜೈನರುನ್ನತಿ ವಿಭವ ಶಿಖರನು ।
ಜೈನ ಜನತೆಯ ಜೀವನೈಸಿರಿದಾತ ಗುರುವರ್ಯ ॥ ೮ ॥

ಜಿನನ ಧರ್ಮದ ವಿಶ್ವಧರ್ಮವ ।
ಜನಕೆ ಬೋಧಿಸಿ ಧರ್ಮದೈಕ್ಯತೆ ।
ಗನುಗೊಳಿಸುತೆಲ್ಲರನು ಸೆಳೆಯುವ ತನ್ನ ಪ್ರತಿಭೆಯೊಳು ॥
ಮನುವು ಜೈನರಿಗಿವನು ಮಷಮುದಿ ।
ಘನತೆರದಲುಪಕೃತಿಯನೆಸಗಿಹ ।
ಜಿನಸಮಯದೀಪಕನು ಸನ್ಮುನಿ ಚಾರುಕೀರ್ತಿ ಗುರು ॥ ೯ ॥

## ಸಾಂಗತ್ಯ

ತೀರ್ಥಯಾತ್ರೆಯ ಮಾಡಿ ಪಾವನರಾಗಲು ।
ಅರ್ಥಿಯಿಂ ಪಯಣವ ಮಾಡಿ ।
ಮರ್ತ್ಯಲೋಕದೊಳತಿ ಪೂಜ್ಯನಾಗಿಹ ಗುರು ।
ವತ್ಯಂತ ಜ್ಞಾನಿಯ ಪಡೆದು ॥ ೧೦ ॥

ವರಸಮ್ಮೇದದಿ ಹಿರಿಯರು ಕರ್ಮವ ।
ತರಿದೀಡಾಡಿದ ಕತೆಯ ॥

ನರುಹುತ ಭವ್ಯರ ಪರಿಪರಿ ವಿಧದೊಳು ।
ಹರುಷಗೊಳಿಸುವನು ಗುರುವು ॥ ೧ ॥

ಇದೋ ಇಲ್ಲಿ ಅಜಿತನು ಕರ್ಮವ ಸುಟ್ಟನು ।
ಅದೋ ನೋಡು ಶಂಭವ ಮುನಿಯು ।
ಪದುಳದಿ ಕರ್ಮಮಲ್ಲನ ಮುರಿದಟ್ಟಿದ ।
ಪದನವನರುಹುವೆನೆನುತ ॥ ೨ ॥

ಈ ತಾಣವಿಹುದಿಲ್ಲಿಯಭಿನಂದನ ಗುರು
ನೂತನ ವಿಧದೊಳು ಸ್ಮರನ ।
ಘಾತಿಸಿ ಪೋದನು ಲೋಕಾಗ್ರ ತಾಣಕೆ
ಖ್ಯಾತನ ಚರಿತೆಯ ಕೇಳ ॥ ೩ ॥

ಸುಮತಿಯತೀಂದ್ರನು ಸುಮತಿಯ ತೋರಿಯುತ
ಸುಮನಸರಧಿಪತಿಯಿಂದ
ಸಮವಸರಣದೊಳಗಮಿತ ಪೂಜೆಯನಾಂತ
ವಿಮಲ ಚರಿತ್ರಯನರುಹಿ ॥ ೪ ॥

ಪದ್ಮಪ್ರಭ ಗುರು ಹೊದ್ದಿದ ಕರ್ಮದಿಂ ।
ಶುದ್ಧನಾದುದ ಕೇಳಿ ನೀವು
ಸದ್ಮವ ರಾಜ್ಯವ ಬಿಟ್ಟೀಕಾಂತದ
ಲಿದ್ದುದನೆಲ್ಲರು ಕೇಳಿ ॥ ೫ ॥

ಮಾರನ ಗೆಲಿದನ ಶೂರ ಸುಪಾರ್ಶ್ವನ ।
ಘೋರದ ತಪವನು ಕೇಳಿ ।
ಆರಾತಿ ಕರ್ಮನು ಮಾರ್ಮಲೆದೈತರೆ ।
ವೀರನು ನಿಗ್ರಹಿಸಿದನು ॥ ೬ ॥

ಚಂದ್ರಪ್ರಭಜನನಂದದ ಕತೆಯನು ।
ಚೆಂದದಿ ಪೇಳುವೆ ಕೇಳಿ ॥
ಮಂದಮಾರುತ ಕೋಕಿಲಂಗಳ ಗೆಲಿಯುನು
ಪೊಂದಿದವನಪಜಯ ಕೇಳಿ ॥ ೧೭ ॥

ಪುಷ್ಪದಂತಾಖ್ಯನು ಪಿಷ್ಟಾಪಮೂರ್ತಿಯು ।
ಪುಷ್ಪಬಾಣನ ಗೆಲ್ದ ಪರಿಯ ॥
ದುಷ್ಟಮರ್ಮ ವಿಜಯಕೆ ತೊಡಗುತ ಕೇಳುತ ।
ನಿಷ್ಕಂಪ ಹೃದಯುವ ತಾಳಿ ॥ ೧೮ ॥

ಶ್ರೀಯಾಂಸದೇವನು ಶ್ರೀ ಶೀತಳಾಖ್ಯನು ।
ಶ್ರೀಯುತ ವಿಮಲಾನಂತ ॥
ಮಾಯವ ಗೆಲ್ದಾ ಧರ್ಮನ ಕತೆಯನು ।
ಆಯದೊಳೊರೆವೆನು ಕೇಳಿ ॥ ೧೯ ॥

ಕುಂಥುಜಿನೇಶನ ಪಂಥದ ತಾಣವು ।
ಸಂತತ ಮೆರೆಯುತಲಿಹುದು ॥
ಕಂತುವ ಜಯಿಸುತ ಭ್ರಾಂತನು ಮಾಡುತ ।
ಚಿಂತೆಯ ತೊರೆದುದ ಕೇಳಿ ॥ ೨೦ ॥

ಅರ ಮಲ್ಲಿಮುನಿವರ ಮುನಿಸುವ್ರತಗುರು ।
ತರಿದಟ್ಟುತೆಂಟು ಕರ್ಮಗಳ ॥
ಅರಹಂತರಾದುದನರುಹುವೆ ಕೇಳಿರಿ ।
ಮರೆಯಿರಿ ಸಂಸಾರದಳಲ ॥ ೨೧ ॥

ನಮಿಸಾಮಿ ಪಾರ್ಶ್ವರು ಕ್ರಮದಿ ತಪವ ಮಾಡಿ ।
ಗಮನಿಸೆ ಲೋಕದ ತುದಿಗೆ ॥

ಸುಮನಸರೊಡೆಯರು ಪವನ ವೇಗದಿ ಬಂದ ।
ಮಲರ ಪೂಜಿದರಿಲ್ಲಿ ॥ ೩೨ ॥

ಪುರುಪರಮೇಶನು ಕೈಲಾಸಗಿರಿಯೊಳು
ವರವಾಸುಪೂಜ್ಯ ಚಂಪೆಯೊಳು ॥
ಕರುಣಿ ನೇಮಿನಾಶನು ಊರ್ಜಂತ ಗಿರಿಯೊಳು
ಪರಮಾತ್ಮ ಪದವಿಯ ಪಡೆದರ ॥ ೩೩ ॥

ಮಹವೀರ ಸಾಮಿಯು ಪಾವಾಪುರಿಯೊಳು
ಮಹದುಗ್ರ ಕರ್ಮವ ಗೆಲ್ದು ॥
ಮಹಿಯೊಳಗುನ್ನತನಾಗುತ ಮುಕುತಿಯು
ಗೃಹವನು ಸಾರಿದನಲ್ತೆ ॥ ೩೪ ॥

ಮಂಗಳ ಜಿನರಿಗೆ ಮಂಗಳ ಗುರುವಿಗೆ
ಮಂಗಳ ಜೈನ ಶಾಸನಕೆ ।
ಮಂಗಳ ಜೀವದಯಾ ಮೂಲಧರ್ಮಕೆ ।
ಮಂಗಳ ಸಕಲ ಭವ್ಯರಿಗೆ ॥ ೩೫ ॥

# ಗೀತೆಗಳು

## ೧. ಶ್ರೀ ಆದಿಜಿನೇಶ್ವರ ಗೀತೆ

ರಾಗ ಪೂರ್ವಿ—ಆದಿತಾಳ

(ಅರಳುವ ಕೋಮಲ ಮಂದಾರ ಸುಮದ ಎಂಬಂತೆ)

ಪುರುಪರಮೇಶನೆ ಮೂಲೋಕದೊಡೆಯ ॥ ಪ ॥

ಪುರುಪರಮೇಶ ದುರಿತ ವಿನಾಶ
ಸುರಪತಿಗೀಶ ಕರುಣಾಧೀಶ ॥ ಪುರುಪರಮೇಶನೆ ॥ಅ॥ ಪ॥

ನಾಭಿಯ ಸೂನು । ಆದಿಯ ಬ್ರಹ್ಮ ।
ಬೋಧಯುತಾಖಿಲ ಮಂದಾರ ಪಿಸುತ ॥ ಪುರು ॥ ॥ ೧ ॥

ಜಗದಾದಿ ಗುರುವೆ । ನಿಗಮ ಕೋವಿದನೆ ।
ಅಗಣಿತ ಗುಣಗಣ ಸಹಜಾನಂದ ॥ ಪುರು ॥ ॥ ೨ ॥

ಮರುದೇವಿ ಕಂದ । ಭರತಗಾನಂದ ।
ಸುರಪತಿವೃಂದ । ಪರಮಾನಂದ ॥ ಪುರು ॥ ॥ ೩ ॥

ಮನುವಿನ ಮಗನೆ । ಮುನಿಗಳೊಡೆಯನೆ ।
ಘನಮತಿವಂತನೆ । ಸನುಮತಿದೋರು ॥ ಪುರು ॥ ॥ ೪ ॥

ಅಸಿಮಸಿಕೃಷಿಯ । ಕಸುಬಿನ ಪರಿಯ ।
ಬೆಸಸಿದೆ ಜನತೆಗೆ । ವಿಷಮಕಾಲದೊಳು ॥ ಪುರು ॥ ॥ ೫ ॥

ಇಕ್ಷುರಸಂಗಳ । ಸೂಕ್ಷ್ಮದಿ ತೆಗೆದು ।
ಭಕ್ಷಿಸಿರೆನ್ನುತ । ಶಿಕ್ಷಣವಿತ್ತೆ ॥ ಪುರು ॥ ॥ ೬ ॥

## ೨. ಶ್ರೀ ಅಜಿತ ತೀರ್ಥಂಕರರ ಜೋಗುಳ

### ಮಕ್ಕಳಿಗಾಗಿ ಬರೆದುದು

ರಾಗ ಜಂಜೂಟಿ—ಆದಿತಾಳ

(ಕಮಲದಳಾಯತನೇತ್ರ ಎಂಬಂತೆ)

ಅಜಿತಕುಮಾರನೆ ಬಾರೊ ।
ವಿಜಯ ಕುಮಾರನೆ ಬಾರೋ ॥ ಪ ॥
ಅಜಿತಕುಮಾರ । ವಿಜಯಕುಮಾರ ।
ತ್ರಿಜಗದ ತಿಲಕನೆ ಬಾರೊ । ಅ । ಪ ॥
ವಿಜಯೆಯು ಕರೆವಳು ಬಾರೋ ।
ಗಜವರ ಲಾಂಛನ ಬಾರೋ ॥
ಭುಜಗಭೂಷಣ ನಿನ್ನ । ಭಜನೆಯ ಗೈಯಲು ।
ಬಿಜಯ ಮಾಡಿರುವನು ಬಾರೊ ॥ ೧ ॥
ಮೇರುಮಂದರದಂತೆ ಬಾರೊ ।
ಸೇರುವರ್ ಸುರರಂತೆ ಬಾರೊ ॥
ಐರಾವತದ ಮೇಲ್ನಿನ್ನಿರಿಸಿ ।
ಪಾರುವರ್ ಗಗನಕೆ ಬಾರೊ ॥ ೨ ॥
ಹಸಿದಿರುವಂತೆ ನೀಂ ಬಾರೊ
ಹುಸಿನಗು ಗೆಳೆಯನೆ ಬಾರೊ ॥
ಕುಸುಮಬಾಣನ ಗೆಲ್ದ । ಅಸಮ ಪರಾಕ್ರಮಿ ।
ಶಶಿಕಳೆ ತೇಜನೆ ಬಾರೊ ॥ ೩ ॥
ಮದುವೆಯು ನಿನಗಹುದಂತೆ ।
ಮುದಮಗನಾಗಬೇಕಂತೆ ॥
ಸದಮಲ ಶೀಲ ಮದನನ ಶೂಲ ।
ಪದುಳದಿಂ ಹಸೆಗೆ ನೀ ಬಾರೊ ॥ ೪ ॥

## ೩. ಶ್ರೀ ಬಾಹುಬಲಿಸ್ವಾಮಿಯ ಕೀರ್ತನೆ

ರಾಗ ಕಾಂಭೋಜಿ–ತಾಳ ಜಂಪೆ

ಈ ಪರಿಯ ಸೊಬಗಾವ ದೇವರೊಳು ಕಾಣೆ ॥ ಪ ॥

ಶ್ರೀಪತಿಯ ಕಂದ ಸಿರಿ ಬಾಹುಬಲಿಗಲ್ಲದೆ ॥ ಈ ಪರಿ ॥ ಅ ॥ ಪ ॥

ಲಾವಣ್ಯದಲಿ ನೋಡೆ ಪ್ರಥಮ ಮನ್ಮಥನಿವನು ।
ಕಾವ ಗುಣದಲಿ ನೋಡೆ ಬೊಮ್ಮನಣುಗ ॥
ಈವ ಗುಣದಲಿ ನೋಡೆ ಭುವಿಯ ತೊರೆದಿಹನಯ್ಯ ।
ಆವಸರಿ ಈತನಿಗೆ ಶ್ರೀ ಬಾಹುಬಲಿಗೆ ॥ ಈ ಪರಿ ॥ ೧ ॥

ಅರಸುತನದಲಿ ನೋಡೆ ಭರತಚಕ್ರಿಯ ಅನುಜ ।
ಗುರುವುತನದಲಿ ನೋಡೆ ಪುರುದೇವ ಸುತನು ॥
ಹಿರಿಯತನದಲಿ ನೋಡೆ ಸುರರಾಜ ಪೂಜಿತನು ।
ಮೆರೆವ ಬೆಳ್ಗೊಳಪುರದಿ ಶ್ರೀ ಬಾಹುಬಲಿಯು ॥ ಈ ಪರಿ ॥ ೨ ॥

ಸೌನ್ದರ್ಯದಲಿ ನೋಡೆ ಚೆಲುವರೊಳು ಚೆಲುವನಿವ
ಔನ್ನತ್ಯದಲಿ ನೋಡೆ ಲೋಕಾಗ್ರಸ್ಥಿತನು ॥
ಮಾನ್ಯತನದಲಿ ನೋಡೆ ಲೋಕಪೂಜಿತನಯ್ಯ ।
ಉನ್ನತನು ನೆಲಸಿಹನು ವಿಂಧ್ಯಾದ್ರಿಯೊಳಗೆ ॥ ಈ ಪರಿ ॥ ೩ ॥

## ೪. ಶ್ರೀ ಬಾಹುಬಲಿಸ್ವಾಮಿ ಕೀರ್ತನೆ

ರಾಗ ಕುರಂಜಿ—ಆದಿತಾಳ

(ಪರಮಾತ್ಮಾ ಹರೆ ಪಾವನನಾಮ ಎಂಬಂತೆ)

ಪರಮಾತ್ಮ ಪ್ರಭು ಬಾಹುಬಲೀಶ ॥ ಪ ॥
ಭಾರತದೊಳು ಮಹಿಮೆದೋರಿದೆಯಾ ಸ್ವಾಮಿ ॥ ಅ ॥ ಪ ॥
ಆರ್ಹತ ಧರ್ಮವ । ಲೋಕಕೆ ಸಾರುವೆ ।
ಶಾಶ್ವತ ಸೌಖ್ಯವನು ಪೊಂದಿದೆಯ್ಯ ಸ್ವಾಮಿ ॥ ಪರ ॥ ೧ ॥
ಇಳೆಯೊಳು ಜನರಿಗೆ ಬೆಳಕನು ತೋರಿಸಿ ।
ಕಲಿಲವ ತೊಳೆದು ಪರಿಪಾಲಿಸಿದ್ಯೆ ಸ್ವಾಮಿ ॥ ಪರ ॥ ೨ ॥
ಮೇದಿನಿಗಮೃತವ ಬೋಧೆಯ ರೂಪದೋಳ್ ।
ವೇದದೊಳಿತ್ತು ಪೊರೆದೆಯಾದಿಯೊಳು ಸ್ವಾಮಿ ॥ ಪರ ॥ ೩ ॥
ಸಕಲ ಧರ್ಮಿಯರ ಭಕುತರ ಗೈದಿಹೆ ।
ಮುಕುತಿಯೊಲ್ಲಭನೆ ಗೊಮ್ಮಟನೇ ಸ್ವಾಮಿ ॥ ಪರ ॥ ೪ ॥
ಐರೋಪ್ಯರ್ಕೈತರೆ ಪಾರಮಾರ್ಥವ ತೋರಿ
ಸೂರೆಗೊಂಡವರ ಮನವನೊಲ್ಮೆಯೊಳು ಗೆಲ್ದೆ ॥ ಪರ ॥ ೫ ॥
ಭರತ ಚಕ್ರೇಶ್ವರ ಮೊರೆಯಿಡೆ ಮೌನದಿ ।
ಘೋರತಾಪಸ್ಯವನು ಪೊಂದಿದೆಯ್ಯ ಸ್ವಾಮಿ ॥ ಪರ ॥ ೬ ॥
ತೊರೆದಿಹೆಯ್ಯ ಸ್ವಾಮಿ । ಮರುಳರ್ಕ್ಕೆಸಿರಿಯನು ।
ವರಮೋಕ್ಷಲಕ್ಷ್ಮಿಯು । ಕರವನು ಪಿಡಿದಿಹೆ ।
ಸುರರಾಜರೊಡೆಯ ಪರಮಪಾವನನೆ ಸ್ವಾಮಿ ॥ ಪರ ॥ ೭ ॥
ಮೂಲೋಕದೊಡೆಯನೆ । ಕಾಲನ ಗೆಲಿದವನೆ ।
ಶ್ರೀಲೋಲನೆ ಸಲಹು ದೀನರನು ಸ್ವಾಮಿ ॥ ಪರ ॥ ೮ ॥

ತಪಕೊಲ್ದು ಸ್ವಾಮಿಯು । ಉಪವಾಸ ಮಾಡಿದೆ ।
ಪಾಪದೋಹಂಗಳನು ಗೆಲ್ದಿಹೆಯ್ಯ ಸ್ವಾಮಿ ॥ ಪರ ॥ ೯ ॥

ಗಮಿಸಿದೆಯ್ಯ ಸ್ವಾಮಿ । ಸುಮನಸ ಪೀಠದಿ ।
ದಮಸಿಸಿ ಕರ್ಮವ । ಪವನನ ವೇಗದಿ ।
ಭುವನದೊಳರಿವ ಬಿತ್ತಿಹೆಯ್ಯ ಸ್ವಾಮಿ ॥ ಪರ ॥ ೧೦ ॥

ಚಾಮುಂಡರಾಯನ । ಪ್ರೇಮದ ಸ್ವಾಮಿಯು ।
ಕಾಮಿತದಾಯಕನೆ । ಗೋಮಟನೇ ಸ್ವಾಮಿ ॥ ಪರ ॥ ೧೧ ॥

*ಈಶ್ವರದಬ್ದದೊಳ್ । ಗಾಸಿಯ ನೀಗಿಸು ।
ದಾಸನ ಧರಣಿಗನ ಪೋಷಿಸು ನೀ ಸ್ವಾಮಿ ॥ ಪರ ॥ ೧೨ ॥

## ೫. ವೈರಾಗ್ಯ ಗೀತೆ

ರಾಗ ಬಾಗೇಶ್ರೀ – ತಾಳ ಜಂಪೆ

(ಬಾಗಿಲನು ತೆರೆದು ನಿನ್ನ ಸೇವೆಯನು ಕೊಡೊ ಹರಿಯೆ ಎಂಬಂತೆ)

ಮೋಹವನು ತೊರೆಸಿ ಎನ್ನ ಗಾಸಿಯನು ತೊಲಗಿಸೊ ॥ ಪ ॥

ಆಸೆಯಲಿ ಮುಳುಗಿಹೆನು ಮೋಸಹೋಗಿಹೆನು ॥ ಅ ॥ ಪ ॥

ಅಧಿಕಾರದಾಸೆಯಲಿ ಹಣದ ಲಾಲಸೆಯಿಂದ ।
ಪದವಿಯ ಬಯಕೆಯಲಿ ಪೂಜಿಸೆನು ನಿನ್ನ ॥
ಭವರೋಗ ವೈದ್ಯನು ನೀನೆಂದು ನಂಬುತಲಿ ।
ಭವದುಗುಡ ಹರಿಸೆಂದು ಪದಕೆರಗಿ ಬೇಡುವೆ ॥ಮೋಹ ॥ ೧ ॥

---

* ಈಶ್ವರನಾಮ ಸಂವತ್ಸರದ ಯುಗಾದಿ ಹಬ್ಬದ ದಿನ ಶ್ರೀ ಗೋಮಟೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಕುಳಿತು ರಚಿಸಿ, ಶ್ರೀ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಮಹಾಸ್ವಾಮಿಯವರ ಸಮ್ಮುಖದಲ್ಲಿ ಹಾಡಿದ ಗೀತೆಯಿದು.

ಊಟ ಫಲಾಹಾರಗಳನೆಷ್ಟೆಷ್ಟು ಭುಜಿಸಿದೆನು
ಇತ್ತವೆ? ಅವು ಎನಗೆ ತೃಪ್ತಿ ಸಂತೋಷವ?
ಬಟ್ಟೆ ಭೂಷಣಗಳು ಎಷ್ಟೆಷ್ಟು ಧರಿಸಿದೆನು? ।
ಕೊಟ್ಟವೆ? ಅವು ಎನಗೆ ಪ್ರಾಸ್ತಿನ ಸೌಖ್ಯ? । ಸೋದ ॥ ೩ ॥

ಮೆಯ್ಯ ಮಮತೆಯು ಎನ್ನ ಬಹು ಭವದಿ ಬಳಲಿಸಿತು ।
ಅಯ್ಯೋ ಎನ್ನುವರಿಲ್ಲ ಕೈ ಹಿಡಿದು ಕಾಯೋ ॥
ಅಯ್ಯ! ನೀನಿಹೆಯೆಂದು ಬಂದಡ್ಡ ಬಿದ್ದಿಹೆನೊ
ದಯ್ಯವಾದ ಮೋಕ್ಷ ದಾರಿಯನು ತೋರಿಸೊ ॥ ಸೋದ ॥ ೪ ॥

## ೭. ಶ್ರೀ ಪದ್ಮಾವತೀದೇವಿಯ ಕೀರ್ತನೆ

ರಾಗ [illegible] । ಕಾಪಿ । ಅಟತಾಳ

(ಜಗದೋದ್ಧಾರನ ಆಡಿಸಿದಳೆಶೋದಾ ಎಂಬಂತೆ)

ಜಗದೋದ್ಧಾರಿಣಿ । ನಾಗಲೋಕದ ರಾಣಿ ।
ಜಗದೋದ್ಧಾರಿಣಿ ॥ ಪ ॥

ಜಗದೋದ್ಧಾರಿಣಿ । ಭೋಗೀಂದ್ರ ಧಾರಿಣಿ
ಖಗೋರಗವಾಹಿನಿ ಶ್ರೀಯಕ್ಷಿ ಪವಿತ್ರಿಣಿ ॥
ಜಗದೋ ॥ ಅ ॥ ಪ ॥

ಜಿನಪದ್ಮರಾಯಗೆ । ಘನರಾಜ್ಯವೀಯುತ
ಅನುಪಮಳೆಂದು ನೀ । ವಿನುತಾತ್ಮಳಾದೆ ॥ ಜಗದೋ ॥ ೧ ॥

ಕನಕವ ಚೆಲ್ಲುತ ಮಿನುಗುವ ಕ್ಷೇತ್ರವ
ಅನುಗೊಳಿಸಿದೆ ನೀನು । ಅನಿಮಿಷರೊಡೆಯಳೆ ॥ ಜಗದೋ ॥

ಪೊಂಬುಜ ಪುರವಿದು । ಕುಂಭಿನಿ ತಿಲಕವು
ಅಂಬೆಯು ನೀನಿಹೆ । ನಂಬಿ ನಾ ಬಂದಿಹೆ ॥ ಜಗದೋ ॥ ೩ ॥

ಭಕ್ತರು ಬರ್ಪರು । ಭಿಕ್ಷೆಯ ಬೇಳ್ಪರು ।
ರಕ್ಷಿಸು ತಾಯಿಯೆ । ಅಕ್ಷಯ ಸುಖಮಿತ್ತು ॥ ಜಗದೋ ॥

ಪಾರ್ಶ್ವನಾಥನ । ಘೋರೋಪಸರ್ಗವ ।
ಪಾರುಮಾಡಿದೆ ತಾಯೆ । ಶೂರ ಫಣೀಂದ್ರಸತಿ ॥ ಜಗದೋ ॥

ಕಲಿಯುಗ ಪುಟ್ಟಿತಂ । ದಲಸಿಕೆ ತೋರಿ ನೀ ।
ಛಳಿಲನೆ ರಸದೊಳಗಿರ್ದೆಯ ದೇವಿಯೆ ॥ ಜಗದೋ ॥ ೬ ॥

ನೀನು ಕೈಬಿಟ್ಟರೆ ಮಾನವರುರ್ವರೆ ।
ಭಾನುತೇಜೋಜ್ವಲೆ ದೀನನ ಪೋಷಿಸು ॥ ಜಗದೋ ॥ ೭ ॥

ಮಂಗಳ ಶ್ರೀಗುರುಕೀರ್ತಿದೇವೇಂದ್ರಗೆ ।
ಮಂಗಳ ಕೃಷ್ಣಗೆ ಮಹಿಸೂರಿನೊಡೆಯಗೆ ॥ ಜಗದೋ ॥ ೮ ॥

ಮಂಗಳ ನಾಗಲೋಕೇಶಗೆ ಯಕ್ಷಗೆ ।
ಮಂಗಳ ಸಿಂಗರ ಪೊಂಬುಜದಾಂಬೆಗೆ ॥ ಜಗದೋ ॥ ೯ ॥

ಉರಗಲೋಕಾಧಿಪನರಸಿಯೆ ಕರುಣಿಯೆ ।
ಮರುಕದ ಒಲುಮೆಯಿಂ ಧರಣನ ಪಾಲಿಸು ॥ ಜಗದೋ ॥

## ೭. ಶ್ರೀ ಪದ್ಮಾವತೀದೇವಿಯ ಸನ್ನಿಧಿಯಲ್ಲಿ ಭಕ್ತನ ಮೊರೆ

ರಾಗ ಕಾಂಬೋಜಿ – ತಾಳ ಜಂಪೆ

(ಅಂತಕನ ಮಾತಿಗೆ ಕಿಂಚಿತ್ತು ದಯೆಯಿಲ್ಲ ಎಂಬಂತೆ)

ಈಸು ದಿನ ಕಂದನನು ಮರೆತಿದ್ದೆ ತಾಯೆ ॥ ಪ ॥
ಕೂಸು ಬಳಲಿದನೆಂದು ಮರುಕಮೋರಿವೆಯಾ ॥ ಅ ॥ ಪ ॥

ಅಂಧಕಾರದ ಬವಣೆ ಕಂದನನು ಕಂದಿಸಿತು ।
ಮಂದಿಗಳ ನೆರವೆಲ್ಲ ಬಯಲಾಯಿತಮ್ಮ ॥

ಮುಂದುಗಾಣದೆ ತಾಯೆ ಚಿಂದಳಿರ ನಿನ್ನಡಿಯ ।
ಪೊಂದಿ ಬಾಳುವೆನೆಂದು ಮರೆಯೊಕ್ಕೆ ದೇವೀ ॥ ಈಸು ದಿನ ॥

ಮೆಲ್ಲಮೆಲ್ಲನೆ ಸುತನ । ಗಲ್ಲವನು ಪಿಡಿಯುತ್ತ ।
ಸೊಲ್ಲಿದೇತಕೆ ಮಗುವೆ ಅದಗಿರ್ಪುದೆಂದು ॥
ತಲ್ಲಣಿಸದಿರು ನಿನ್ನ ಕಾಯೆ ಬಂದಿಹೆನೆಂದು ।
ಉಲ್ಲಸವ ಜೀವನಕೆ ತುಂಬಿದೆಯ ತಾಯೆ ॥ ಈಸು ದಿನ ॥

ಮಾತುಕೊಟ್ಟವರೆಲ್ಲ ಮೊಗದಿರುಗಿ ನಡೆದರು ।
ಸೋತುಹೋದೆನು ದೇವಿ ನರರ ನಂಬಿ ॥
ಮಾತುಮಾತಿಗು ನಿನ್ನ ಕೂಗಿ ಕರೆಯುತಲಿರುವೆ ।
ಕಾತುರದಿ ಬಂದೆನ್ನ ಸಲಹಿದೆಯ ತಾಯೆ ॥ ಈಸು ದಿನ ॥

ಅಧಿಕಾರಿಯೊಬ್ಬರನು ಅರಸಿ ನಾ ಪೋಗುತಿರೆ ।
ಅಧಿಕ ದುಃಖವನಾಂತು ಕಂಬನಿಯಗರೆದು ॥
ಮುದುಕಿ ತಿರುಕಿಯ ಮೊಗದಿ ನುಡಿಸಿದಭಯವ ತಾಯೆ ।
ಒದಗಿದಾಪತ್ತೆಲ್ಲ ಕಡೆಗಾಣ್ಬುದೆಂದು ॥ ಈಸು ದಿನ ॥

ಧರಣೇಂದ್ರ ಯಕ್ಷನ । ಅರಸಿಯಳೆ ಪದ್ಮಿನಿಯೆ ।
ವರಭಕ್ತ ಜನದತ್ತಗೊಲಿದ ತಾಯೆ ॥
ಪೊರೆಯಮ್ಮ ಧರಣಿಗನ ವರವ ಹಸ್ತವ ನೀಡಿ ।
ಕರುಣಾಳು ವರಮಾತೆ ಪರಮಾತ್ಮ ಭಕ್ತೆ ॥ ಈಸು ದಿನ ॥

## ೮. ಶ್ರೀ ಜ್ವಾಲಾಮಾಲಿನೀದೇವಿ ಸ್ತೋತ್ರ ಪಂಚಕ

ಕಂದ

ಸಿಂಹನ ಗದ್ದುಗೆಯೊಡೆಯಂ ।
ಸಿಂಹಾಸನ ಮಧ್ಯಮಿರ್ಪ ಕಮಲಾಗ್ರದೊಳಂ ॥
ಬೃಂಹಿತ ದಿವ್ಯ ಧ್ವನಿಯೋಳ್ ।
ಬ್ರಹ್ಮಾಂಡಕ್ಕರಿಪನಿತ್ತ ಜಿನಪಂ ಪೊರೆಗೆ ॥ ೧ ॥

ಚಂದ್ರಪ್ರಭ ಜಿನವರನಂ
ನಂದದೊಳಂ ಪೂಜಿಸುತ್ತ ಜಗಮಂ ಪೊರೆವ ।
ವಂದಿತೆ ಜ್ವಾಲಿನಿದೇವಿಯು
ನಂದನರೆಂದೆಮ್ಮ ಪೊರೆಗೆ ಚಿರಕಾಲದೊಳಂ ॥ ೨ ॥

ಭಾಮಿನಿ ಷಟ್ಪದಿ

ದೇವಿ ಜೈನಾಗಮ ರಕ್ಷಿಪ ।
ಕೋವಿದಳೆ ಶ್ರೀಪತಿಯ ಭಕ್ತಳೆ
ಕಾವುದೀ ಕ್ಷೇತ್ರವನು ಜೈನ ಜನಾಂಗದೈಸಿರಿಯು ।
ಭಾವಿಸುವೆಮ್ಮಯ ಪೂಜ್ಯಳೆ
ಆವಗಂ ದಯೆದೋರಿ ರಕ್ಷಿಸು
ಪಾವನಾತ್ಮನ ಧರ್ಮಮಾರ್ಗವೊಳಿರಿಸು ಬುದ್ಧಿಯನು ॥ ೩ ॥

ವಿಮಲೆ ಜ್ವಾಲಿನಿ ಧರ್ಮ ಪೋಷಿಣೆ ।
ಅಮಿತ ಬಲಯುತೆ ಮಾರ್ಗದರ್ಶಿನಿ ।
ಸುಮನಸಾಧಿಪ ಚಂದ್ರಪ್ರಭುವಿನ ಯಕ್ಷಿ ಭೂಮಾತೆ ।
ಗಮನಿಸೆಮ್ಮಯ ದೀನ ಮೊರೆಯನು ।
ಸುಮುವ ಬಲವಿತ್ತು ಪಾಲಿಸು ।
ದಮನಿಸೆಮ್ಮಯ ಕರ್ಮಭೂತವ ಪಾಪ ನಿವಹನು ॥ ೪ ॥

ಮಂಗಳವು ಜೈನೇಂದ್ರ ಚಂದ್ರಗೆ
ಮಂಗಳವು ಶಾಂತೀಶ ಜಿನರಿಗೆ
ಮಂಗಳವು ಶಾಮ್ಯಕ್ಷಜ್ವಾಲಿನಿದೇವಿ ಪದ್ಮಿನಿಗೆ ॥
ಮಂಗಳವು ಜೀವದಯೆ ಧರ್ಮಕೆ
ಮಂಗಳವು ನರಪತಿಗೆ ಕೃಷ್ಣಗೆ
ಮಂಗಳವು ಸಿರಿ ಸಿಂಹಸೇನದ ಭಕ್ತಮಂಡಲಿಗೆ ॥ ೫ ॥

## ೯. ಶ್ರೀ ಜ್ವಾಲಾಮಾಲಿನೀದೇವಿ ಕೀರ್ತನೆ

ರಾಗ ಕುರಂಜಿ — ಆದಿತಾಳ

**(ಪರಮಾತ್ಮಾ ಹರಿ ಪಾವನನಾಮು ಎಂಬಂತೆ)**

ಮಹದೇವಿ ಪೊರೆ ಜ್ವಾಲಿನಿ ತಾಯಿಯೆ ॥ ಪ ॥
ಇಹಲೋಕದೊಳು ಸಹಿಸೆ ದಂದುಗವ ದೇವಿ ॥ ಅ ॥ ಪ ॥

ಶ್ಯಾಮರಾಜೇಂದ್ರನ ಪ್ರೇಮದ ಭಾಮಿನಿ ।
ಪಾಮರನೀಗ ಮಣಿವೆ ಭಕ್ತಿಯಲಿ ದೇವಿ ॥ ಮಹದೇವಿ ॥ ೧ ॥

ಬೊಗಸೆಯನೊಡ್ಡಿಹೆ ಅಗಣಿತ ಮಹಿಮಳೆ ।
ಮಗುವಿನ ಬಗೆಗೆ ಸೊಗವ ನೀಡುವೆಯಾ ತಾಯೆ ॥ ಮಹದೇವಿ ॥

ಚಂದ್ರಜಿನೇಂದ್ರನ ಮಂದರವಾಸನ ।
ಕುಂದದ ಭಕ್ತಿಯೊಳು ಪೂಜಿಸಳೇ ತಾಯಿ ॥ ಮಹದೇವಿ ॥

ಮಹಿಷವನೇರುತೆ ಮಹಿಮೆಯ ಬೀರುತೆ ।
ಮಹಿಯೊಳು ದಯೆಯ ಬೀರಿದೆಯಾ ತಾಯೆ ॥ ಮಹದೇವಿ ॥

ಸಿಂಗನ ಗದ್ದುಗೆ ಮಂಗಳಮೂರ್ತಿಯೆ ।
ಹಿಂಗಿಸು ಜವನ ಬಾಧೆಯನು ತಾಯೆ ॥ ಮಹದೇವಿ ॥ ೫ ॥

ಧರಣಿಗ ದಾಸನ ಪೊರೆಯುವ ಮಾತೆಯೆ ।
ಕರುಣದಿ ಬೀರು ಜಗಕೆ ಶಾಂತಿಯನು ತಾಯೆ ॥ ಮಹದೇವಿ ॥

## ೧೦. ಶ್ರೀ ಜಿನದತ್ತರಾಯನ ಗುಣಗಾನ

ರಾಗ ಯಮುನ್ – ಆದಿತಾಳ

(ಮುರಹರ ಮಾಧವ ಶ್ರೀವಾಸುದೇವ ಎಂಬಂತೆ)

ಶ್ರೀಯಲೆಯಣುಗನೆ ವರಜಿನದತ್ತನೆ ॥ ಪ ॥

ಶ್ರೀಯಧಿಪತಿ ಪಾರ್ಶ್ವನ ಭಕ್ತನೆ ॥ ಶ್ರೀಯಲೆ ॥ ಅ ॥ ಪ ॥

ಉತ್ತರಮಧುರೆಯಿಂದುತ್ತಮ ಬಂದು ।
ಸತ್ಯದ ನಿಧಿಯಿಂದಿತ್ತಿಹ ಕ್ಷೇತ್ರವ ॥ ಶ್ರೀಯಲೆ ॥ ೧ ॥

ಪೊಂಬುಜದಾಂಬೆಯ ಸಂಬುತ ಪೂಜಿಸಿ ।
ತುಂಬಿದ ರಾಜ್ಯವನಿಂಬಿನಿಂ ಪೊರೆದೆ ॥ ಶ್ರೀಯಲೆ ॥ ೨ ॥

ಕಲಿಗಾಲದುದಯವ ಕಲಿಸಲು ಜನತೆಗೆ ।
ಸಲಿಸಿದೆಯುತ್ತಮ । ಮಣಿಯನ್ನರಸಿಗೆ ॥ ಶ್ರೀಯಲೆ ॥ ೩ ॥

ಕೇಳಿನ ಮಣಿಯಂ । ಲೋಲಳಿಗೊಪ್ಪಿಸೆ ।
ಕಾಲದ ದುರ್ದಿನವೊಂದಿಳೆಗಿಳಿದಳು ॥ ಶ್ರೀಯಲೆ ॥ ೪ ॥

ನಿನ್ನ ಚಾರಿತ್ರವು ನನ್ನಿಯು ನಿಲುಗೆ ।
ಸನ್ನುತೆ ಪದ್ಮಿನಿದೇವಿಯ ದಯೆಯಿಂ ॥ ಶ್ರೀಯಲೆ ॥ ೫ ॥

# ಕೋಲಾಟದ ಹಾಡುಗಳು

## ೧

ರಾಗ : ಮಧ್ಯಮಾವತಿ ಕಾಪಿ—ಅಟ್ಟತಾಳ

ಯಾರಿಗೆ ಯಾರುಂಟು ಜನತಂದೆ । ನಿನ್ನ
ಕೋರಿ ನಾ ಬಂದೆನು ಜನತಂದೆ ॥ ಪ ॥

ಮಾರವಿಜಯ ಶ್ರೀಶ ಜನತಂದೆ ।
ಸಾರಧರ್ಮವ ತೋರೋ ಜನತಂದೆ ॥ ೧ ॥

ತಂದೆ ತಾಯಿಯು ನೀನೆ ಜನತಂದೆ । ಎನ್ನ
ಬಂಧು ಬಳಗ ನೀನೆ ಜನತಂದೆ ॥
ನೊಂದೆ ಸಂಸಾರದಿ ಜನತಂದೆ । ಎನ್ನ
ಬಂಧನ ಹರಿಸೆಲೊ ಜನತಂದೆ ॥ ೨ ॥

ಮೂಡುತ ಮುಳುಗುತ ಜನತಂದೆ । ನಾನು
ಓಡಾಡಿ ಬೇಸತ್ತೆ ಜನತಂದೆ ॥
ಕಾಡುವ ಕರ್ಮವ ಜನತಂದೆ ।
ಈಡಾಡಿ ಪಾಲಿಸೊ ಜನತಂದೆ ॥ ೩ ॥

ಮಗನನು ನಂಬಲಿ ಜನತಂದೆ । ಆವ
ಹಗೆಯಂತೆ ಕಾಣ್ಬನು ಜನತಂದೆ ॥
ಬಗೆಗೆ ಶಾಂತಿಯನಿತ್ತು ಜನತಂದೆ । ಎನ್ನ
ಹಗರಣ ಹರಿಸೆಲೊ ಜನತಂದೆ ॥ ೪ ॥

ಆಸೆ ಮೋಸಗಳಿಂದ ಜನತಂದೆ । ನಾನು
ಸಾಸವ ಮಾಡಿದೆ ಜನತಂದೆ ॥
ಲೇಸಿಲ್ಲ ನೊಂದೆನು ಜನತಂದೆ । ಬಂಧ
ಪಾಶವ ಹರಿಯೆಲೋ ಜನತಂದೆ ॥ ೫ ॥

ದೇವಲೋಕದ ಗತಿ ಜಿನತಂದೆ । ಅದು
ಭಾವಿಸೆ ಚಿರವಲ್ಲ ಜಿನತಂದೆ ॥
ಸಾವಿಲ್ಲದಪವರ್ಗ ಜಿನತಂದೆ । ಅದು
ನೋವನಾರಿಸುವುದು ಜಿನತಂದೆ ॥ ೬ ॥

ಅರಿವಿನಾಗರ ನೀನು ಜಿನತಂದೆ । ಸ್ವಾಮಿ
ಚರಮದೇಹಿಯು ನೀನು ಜಿನತಂದೆ ।
ಮೆರೆವೆ ಲೋಕಾಗ್ರದಿ ಜಿನತಂದೆ । ಎನ್ನ
ಗುರುವೆ ಪದ್ಮಪ್ರಭ ಜಿನತಂದೆ ॥ ೭ ॥

ಆದಿ ಜಿನೇಶನೆ ಜಿನತಂದೆ ।
ಬೋಧೆಯನಿತ್ತನೆ ಜಿನತಂದೆ
ಮೋದವ ಪೊಂದಿದೆ ಜಿನತಂದೆ ।
ಸಾಧಿಸಿ ತಪಗಳ ಜಿನತಂದೆ ॥ ಯಾರಿಗೆ ಯಾರುಂಟು ॥ ೮ ॥

## ೨

## ಶ್ರೀ ಗೋಮಟಜಿನಸ್ವಾಮಿಯ ಕೋಲಾಟದ ಹಾಡು

ರಾಗ ಕಾಪಿ — ಆದಿತಾಳ

ಯಾರು ಕೈ ಬಿಟ್ಟರು ನೀ ಕೈಯ ಬಿಡದಿರು ।
ಗೋಮಟೇಶ ಗೋಮಟೇಶ ।
ಗೋಮಟ ಜಿನಸ್ವಾಮಿ । ಗೋಮಟೇಶ ಗೋಮಟೇಶ
॥ ಪ ॥

ಮುಂದಕೆ ಕಾಣುತಿದೆ ಕಗ್ಗಲ್ಲ ಕಣಿವೆಯು ।
ಗೋಮಟೇಶ ಗೋಮಟ ಜಿನಸ್ವಾಮಿ ।
ಹಿಂದಕೆ ಕಾಣುತಿದೆ ಮರುಭೂಮಿ ಸುಡುಗಾಡು ॥
ಗೋಮಟೇಶ ಗೋಮಟೇಶ
ಗೋಮಟ ಜಿನಸ್ವಾಮಿ ಗೋಮಟೇಶ ಗೋಮಟೇಶ ॥ ೧ ॥

ಪರಮಬಂಧುಗಳೆಂದು ಮರೆಹೊಕ್ಕೆ ಸ್ವಾಮಿಯು ।
ಗೋಮಟೇಶ ಗೋಮಟ ಜಿನಸ್ವಾಮಿ ।
ಮರುಗದೆ ಬಿಟ್ಟರು ಕರುಣಿಸಿ ಪಾಲಿಸೊ
ಗೋಮಟೇಶ ಗೋಮಟೇಶ ॥ ೨ ॥

ಜಗಕಾನು ಬರುವಾಗಲೊಬ್ಬನೆ ಬಂದೆನು ।
ಗೋಮಟೇಶ ಗೋಮಟ ಜಿನಸ್ವಾಮಿ ।
ಜಗದಿಂದ ಹೋಗುವಾಗಲೊಬ್ಬನೆ ಹೋಹೆನು
ಗೋಮಟೇಶ ಗೋಮಟೇಶ ॥ ೩ ॥

ಕಣ್ಣಲಿ ನೋಡುವೆ ಕೈಗಳು ಕಟ್ಟುವ ।
ಗೋಮಟೇಶ ಗೋಮಟ ಜಿನಸ್ವಾಮಿ
ದಮ್ಮಯ್ಯ ನೀನೆಂದು ಬಾಯು ನುಡಿಯುತಿದೆ
ಗೋಮಟೇಶ ಗೋಮಟೇಶ ॥ ೪ ॥

ಸಣ್ಣವ ನಾನಾದೆಯುಳ್ಳವ ಸುಖಿಸಿಲ್ಲ ।
ಗೋಮಟೇಶ ಗೋಮಟ ಜಿನಸ್ವಾಮಿ
ಬಣ್ಣವು ಕಂದಿತು ದೇಹವು ಬಳಲಿತು
ಗೋಮಟೇಶ ಗೋಮಟೇಶ ॥ ೫ ॥

ಆಳುದ್ದ ದೇಹವ ಗೇಣುದ್ದ ಕೆಳಸುತ ।
ಗೋಮಟೇಶ ಗೋಮಟ ಜಿನಸ್ವಾಮಿ
ಗೋಳಾಡಿ ಬೇಡಿದೆನು ನೊಂದವರಿಲ್ಲವು
ಗೋಮಟೇಶ ಗೋಮಟೇಶ ॥ ೬ ॥

ಮಾದರಿ ಮನುಜರು ಮರುಳಾಗಿ ಹೋದರು ।
ಗೋಮಟೇಶ ಗೋಮಟ ಜಿನಸ್ವಾಮಿ ॥

ಚಿನ್ನದ ಮೆರುಗದು ಮರುಳರ ಮಾಡಿತು ।
ಗೋಮಟೇಶ ಗೋಮಟೇಶ ॥ ೭ ॥
ಕಂಡಕಂಡವರಿಗೆ ಕೈಮುಗಿವಾಯಿತು ।
ಗೋಮಟೇಶ ಗೋಮಟ ಜಿನಸ್ವಾಮಿ ॥
ಭಂಡತನವು ಬಂತು ಬಡತನ ನೀಗಲಿಲ್ಲ ।
ಗೋಮಟೇಶ ಗೋಮಟೇಶ ॥ ೮ ॥
ಪರರ ಸೇವೆಯ ಕತದಿ ಪರಮಾತ್ಮ ನಿನ್ನನು ।
ಗೋಮಟೇಶ ಗೋಮಟ ಜಿನಸ್ವಾಮಿ ॥
ಮರೆತೆನು ಪಾಪಿಯು ನಿರುತ ನಾನಾದೆನು ।
ಗೋಮಟೇಶ ಗೋಮಟೇಶ ॥ ೯ ॥
ಆಸೆಯ ತೊಲಗಿಸು ಮೋಹವ ನೀಗಿಸು ।
ಗೋಮಟೇಶ ಗೋಮಟ ಜಿನಸ್ವಾಮಿ ।
ಸಾಸಿರ ನಾಮನೆ ಲೇಸನು ಪೊಂದಿಸು ।
ಗೋಮಟೇಶ ಗೋಮಟೇಶ ॥
ಗೋಮಟ ಜಿನಸ್ವಾಮಿ ।
ಗೋಮಟೇಶ ಗೋಮಟೇಶ ॥ ೧೦ ॥

### ೩

ರಾಗ ನವರೋಜು–ತಾಳ ತ್ರಿಸ್ರಗತಿ

ಹಿಂದಿಲ್ಲ ಸ್ವಾಮಿ ಮುಂದಿಲ್ಲ ।
ಜಿನೇಂದ್ರನ ಬಿಟ್ಟರೆ ಇಹ ಪರವಿಲ್ಲ ॥ ಪ ॥
ದೇವಾಧಿದೇವನೆ ಕೇವಲಬೋಧನೆ ।
ಹಿಂದಿಲ್ಲ ಸ್ವಾಮಿ ಮುಂದಿಲ್ಲ ॥
ಜಿನೇಂದ್ರ ಬಿಟ್ಟರೆ ಇಹ ಪರವಿಲ್ಲ ।
ಹಿಂದಿಲ್ಲ ಸ್ವಾಮಿ ಮುಂದಿಲ್ಲ ॥ ಅ ॥ ಪ ॥

ಮಂದರವಾಸನೆ ಚಂದ್ರಜಿನೇಶನೆ ।
ಹಿಂದಿಲ್ಲ ಸ್ವಾಮಿ ಮುಂದಿಲ್ಲ ॥
ಜಿನೇಂದ್ರನ ಬಿಟ್ಟರೆ ಇಹ ಪರವಿಲ್ಲ ।
ಹಿಂದಿಲ್ಲ ಸ್ವಾಮಿ ಮುಂದಿಲ್ಲ ॥ ಅ ॥ ಪ ॥

ತನುವು ತನ್ನದಲ್ಲ ತನ್ನವರು ತನಗಿಲ್ಲ
ಇಹದಲ್ಲಿ ಸೊಗವಿಲ್ಲ । ಪರದಲ್ಲಿ ಗತಿಯಿಲ್ಲ
ಹಿಂದಿಲ್ಲ ಸ್ವಾಮಿ ಮುಂದಿಲ್ಲ
ಜಿನೇಂದ್ರನ ಬಿಟ್ಟರೆ ಇಹ ಪರವಿಲ್ಲ ॥
ಹಿಂದಿಲ್ಲ ಸ್ವಾಮಿ ॥ ೧ ॥

ಮಂದಿ ಮಾರ್ಬಲವೆಲ್ಲಿ ಸುಡುಗಾಡ ಪಾಲು
ಸುಂದರ ತನುವಿದು ಅಗ್ನಿಯ ಪಾಲು ॥
ಕಂದಿದೆ ಕುಂದಿದೆ ಸಂಸಾರದೊಳಗೆ ।
ಬಂಧನ ಹರಿಸೆಲೋ ದೇವಾಧಿದೇವ ॥
ಹಿಂದಿಲ್ಲ ಸ್ವಾಮಿ ॥ ೨ ॥

ಕಾಂಚನ ಕಾಮಿನಿ ಕನಸಿನ ಮಾಯೆ ।
ಸಿರಿತನದಿರಿವದು ಸಿರಿಯ ಬೂಟಾಟ
ಮರುಗಿದೆ ಕೊರಗಿದೆ ಪರಿಪರಿ ವಿಧದಿ
ಸುರರಾಜರೊಡೆಯನೆ ಗೊಮಟ ಮಹಾರಾಜ ।
ಹಿಂದಿಲ್ಲ ಸ್ವಾಮಿ ॥ ೩ ॥

ಸುರನರ ತಿರಿಯಂಚ ನರಕಗಳೆಂಬ
ಪರಿಪರಿ ಭವದಲಿ ತೊಳಲಿದೆ ಸ್ವಾಮಿ
ಹುರುಳಿಲ್ಲ ತಿರುಳಿಲ್ಲ ಮರುಗಿದೆ ದೇವ ।
ದೊರಕಿಸು ನಿತ್ಯದ ಕೈವಲ್ಯ ಸುಖವ ।
ಹಿಂದಿಲ್ಲ ಸ್ವಾಮಿ ॥ ೪ ॥

## ೪

## ದೇವರಾಜ ವಲ್ಲಭ ಗೀತೆ

### ರಾಗ ಸಾರಂಗ್ — ಏಕತಾಳ

ಹಸಿವು ತೃಷೆಯು ನಿದ್ರೆಯೆಂಬ ।
ಕಸವ ಪಿಡಿದು ನರಳಿದೆ ।
ಮುಸುಳಿಸೆನ್ನ ಮೂಢಮತಿಯ
ದೇವರಾಜ ವಲ್ಲಭ ॥ ೧ ॥

ಕೊಲೆಗೆ ಪುಸಿಗೆ ಕಳವಿನಘಕೆ ।
ಬಲಿಯನಿತ್ತೆನಾತ್ಮನಂ
ಮಲಿನವಾದೆ ಸ್ವಾಮಿ ನಾನು
ದೇವರಾಜ ವಲ್ಲಭ ॥ ೨ ॥

ಪರರ ಸತಿಗೆ ಮನವಗೊಟ್ಟು ।
ಸೊರಗಿ ಬಳಲಿ ಭವದಲಿ ।
ಕೊರಗುತಿರುವೆ ಕಾಯೊ ಎನ್ನ ।
ದೇವರಾಜ ವಲ್ಲಭ ॥ ೩ ॥

ಆಸೆಗಳಲಿ ಕ್ಲೇಶಪಟ್ಟು ।
ಮೋಸಹೋದೆ ಸ್ವಾಮಿಯೆ ।
ಲೇಸನಿತ್ತು ಪಾಲಿಸೆನ್ನ ।
ದೇವರಾಜ ವಲ್ಲಭ ॥ ೪ ॥

ಖಗವು ಕಡಲಮೇಲೆ ಹಾರಿ ।
ಮಗುಳೆ ತಡಿಯ ಕಾಣದಂತೆ ।
ಸೊಗವ ದೂಡಿ ಭವದಿ ಸುಳಿವೆ ।
ದೇವರಾಜ ವಲ್ಲಭ ॥ ೫ ॥

ತಿಂದು ತಿಂದು ತಣಿಯೆನಯ್ಯ ।
ಬೆಂದು ಬೆಂದು ನೋಯೆನಯ್ಯ ।
ತಂದೆ ನೀನೆ ಸಲಹೊ ಸ್ವಾಮಿ ।
ದೇವರಾಜ ವಲ್ಲಭ ॥ ೬ ॥

ಬಸದಿಯಲ್ಲಿ ಮುನಿಯನಾಡಿ ।
ವ್ಯಸನದಲ್ಲಿ ಮುಳುಗಿದೆ ।
ಹಸನಮಾಡು ಬದುಕನಿದನು ।
ದೇವರಾಜ ವಲ್ಲಭ ॥ ೭ ॥

ಪರರ ಸಿರಿಗೆ ಕರುಬಿ ಕರುಬಿ ।
ಮರುಳು ಮೂರ್ಖನಾದೆ ಸ್ವಾಮಿ ।
ಗುರುವೆ ಕರುಣದೋರಿ ಕಾಯೊ ।
ದೇವರಾಜ ವಲ್ಲಭ ॥ ೮ ॥

ಹಿತನು ನೀನೆ ಗತಿಯು ನೀನೆ ।
ಸತತ ಪೊರೆವ ಸ್ವಾಮಿ ನೀನೆ ।
ಮತಿಯ ಶ್ರುತವನಿತ್ತು ಪೊರೆಯೊ ।
ದೇವರಾಜ ವಲ್ಲಭ ॥ ೯ ॥

ನಿತ್ಯಸುಖವು ಆತ್ಮರೂಪ ।
ನಿತ್ಯವಲ್ಲ ದೇಹರೂಪ ।
ಸತ್ಯದರಿವ ಕರುಣಿಸಯ್ಯ
ದೇವರಾಜ ವಲ್ಲಭ ॥ ೧೦ ॥

ನಿನ್ನ ಪೂಜೆ ನಿನ್ನ ಸ್ತವನ ।
ಬನ್ನಪಡಿಪುವಘವನುಂ ।
ನಿನ್ನ ಸೇವೆ ಸೊಗವನೀಯೊ ।
ದೇವರಾಜ ವಲ್ಲಭ ॥ ೧೧ ॥

ಪರರ ಸೇವೆ ಕೊರಕಲಲ್ಲಿ ।
ಕೊರಗಿ ಕೊರಗಿ ನರಳಿದೆ ।
ಮರುಕದಿಂದ ಕರವ ನೀಡೊ ।
ದೇವರಾಜ ವಲ್ಲಭ ॥ ೧೨ ॥

---

214—40. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು